# ತೇಜಸ್ವಿ ಕಾದಂಬರಿಗಳಲ್ಲಿ ಸಾಮಾಜಿಕ ಪ್ರಜ್ಞೆ

[ಚಿದಂಬರ ರಹಸ್ಯ ಮತ್ತು ಜುಗಾರಿಕ್ರಾಸ್ ಕಾದಂಬರಿಗಳನ್ನು ಅನುಲಕ್ಷಿಸಿ]

ಕನ್ನಡ ಸಾಹಿತ್ಯದಲ್ಲಿ ಎಂ.ಫಿಲ್ ಪದವಿಗಾಗಿ
ಕನ್ನಡ ವಿಶ್ವವಿದ್ಯಾಲಯ ಹಂಪಿ ಇದಕ್ಕೆ ಅರ್ಪಿಸಿದ ನಿಬಂಧ


ನಿಬಂಧಕಾರರು
**ಗೋಪಾಲ್ .ಪಿ**
ಪುಟ್ಟಕೋಡಿ, ಕೊಕ್ಕಡ
ಕೊಕ್ಕಡ, ಬೆಳ್ತಂಗಡಿ ತಾಲೂಕು





ಮಾರ್ಗದರ್ಶಕರು
ಡಾ। ಬಿ.ಪಿ. ಸಂಪತ್‌ಕುಮಾರ
ಮುಖ್ಯಸ್ಥರು, ಕನ್ನಡ ವಿಭಾಗ
ಶ್ರೀ.ಧ.ಮ.ಕಾಲೇಜು, ಉಜಿರೆ



ಡಾ। ಹಾ.ಮಾ.ನಾ ಸಂಶೋಧನ ಕೇಂದ್ರ
ಶ್ರೀ.ಧರ್ಮಸ್ಥಳ ಮಂಜುನಾಥೇಶ್ವರ ಕಾಲೇಜು, ಉಜಿರೆ
ಕನ್ನಡ ವಿಶ್ವವಿದ್ಯಾಲಯ ಹಂಪಿ, ಹೊಸಪೇಟೆ.

# ತೇಜಸ್ವಿ ಕಾದಂಬರಿಗಳಲ್ಲಿ ಸಾಮಾಜಿಕ ಪ್ರಜ್ಞೆ

[ಚಿದಂಬರ ರಹಸ್ಯ ಮತ್ತು ಜುಗಾರಿಕ್ರಾಸ್ ಕಾದಂಬರಿಗಳನ್ನು ಅನುಲಕ್ಷಿಸಿ]

ಕನ್ನಡ ಸಾಹಿತ್ಯದಲ್ಲಿ ಎಂ.ಫಿಲ್ ಪದವಿಗಾಗಿ

ಕನ್ನಡ ವಿಶ್ವವಿದ್ಯಾಲಯ ಹಂಪಿ ಇದಕ್ಕೆ ಅರ್ಪಿಸಿದ ನಿಬಂಧ


ನಿಬಂಧಕಾರರು

**ಗೋಪಾಲ್ .ಪಿ**

ಪುಟ್ಟಕೋಡಿ, ಕೊಕ್ಕಡ

ಅಂಚೆ ಕೊಕ್ಕಡ, ಬೆಳ್ತಂಗಡಿ ತಾಲೂಕು





ಮಾರ್ಗದರ್ಶಕರು

**ಡಾ। ಬಿ.ಪಿ. ಸಂಪತ್‌ಕುಮಾರ**

ಮುಖ್ಯಸ್ಥರು, ಕನ್ನಡ ವಿಭಾಗ

ಶ್ರೀ.ಧ.ಮ.ಕಾಲೇಜು, ಉಜಿರೆ



**ಡಾ। ಹಾ.ಮಾ.ನಾ. ಸಂಶೋಧನ ಕೇಂದ್ರ**

**ಶ್ರೀ.ಧರ್ಮಸ್ಥಳ ಮಂಜುನಾಥೇಶ್ವರ ಕಾಲೇಜು, ಉಜಿರೆ**

**ಕನ್ನಡ ವಿಶ್ವವಿದ್ಯಾಲಯ ಹಂಪಿ, ಹೊಸಪೇಟೆ.**

**ಅಕ್ಟೋಬರ್ - 2009**

# ದೃಢೀಕರಣ

## 'ತೇಜಸ್ವಿ ಕಾದಂಬರಿಗಳಲ್ಲಿ ಸಾಮಾಜಿಕ ಪ್ರಜ್ಞೆ'

[ಚಿದಂಬರ ರಹಸ್ಯ ಮತ್ತು ಜುಗಾರಿ ಕ್ರಾಸ್ ಕಾದಂಬರಿಗಳನ್ನು ಅನುಲಕ್ಷಿಸಿ]

ಈ ನಿಬಂಧವನ್ನು ನಾನು ಕನ್ನಡ ವಿಶ್ವವಿದ್ಯಾಲಯ, ಹಂಪಿ ಇದಕ್ಕೆ ಸಂಯೋಜಿತವಾದ ಉಜಿರೆಯ ಡಾ। ಹಾ.ಮಾ.ನಾ ಸಂಶೋಧನ ಕೇಂದ್ರದಲ್ಲಿ ಡಾ। ಬಿ.ಪಿ. ಸಂಪತ್ ಕುಮಾರ ಇವರ ಮಾರ್ಗದರ್ಶನದಲ್ಲಿ ಎಂ.ಫಿಲ್ ಪದವಿಗಾಗಿ ಸಿದ್ಧಪಡಿಸಿದ್ದೇನೆ. ಇದರ ಯಾವುದೇ ಭಾಗ ಎಲ್ಲೂ ಪ್ರಕಟವಾಗಿಲ್ಲ ಮತ್ತು ಇತರ ಯಾವುದೇ ಉದ್ದೇಶಗಳಿಗೆ ಬಳಕೆಯಾಗಿಲ್ಲ.

ಉಜಿರೆ ( ಗೋಪಾಲ್.ಪಿ)

9/9/2009.

## ಪ್ರಮಾಣ ಪತ್ರ

ಶ್ರೀಯುತ ಗೋಪಾಲ್.ಪಿ ಇವರು 'ತೇಜಸ್ವಿ ಕಾದಂಬರಿಗಳಲ್ಲಿ ಸಾಮಾಜಿಕ ಪ್ರಜ್ಞೆ' ಎಂಬ ಶೀರ್ಷಿಕೆಯ ಈ ನಿಬಂಧವನ್ನು ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾನಿಲಯಕ್ಕೆ ಸಾದರ ಪಡಿಸಲು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಇದರಲ್ಲಿನ ವಿಷಯವನ್ನು ಅಥವಾ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿ ಮತ್ತು ಉದ್ದೇಶಗಳಿಗಾಗಲೀ ಅವರು ಒಪ್ಪಿಸಿಲ್ಲ.

**ಡಾ| ಬಿ.ಪಿ. ಸಂಪತ್‌ಕುಮಾರ**

ಮಾರ್ಗದರ್ಶಕರು

ಮುಖ್ಯಸ್ಥರು, ಕನ್ನಡ ವಿಭಾಗ

ಶ್ರೀ.ಧ.ಮ.ಕಾಲೇಜು, ಉಜಿರೆ

# ಅನುಕ್ರಮಣಿಕೆ

ಅಧ್ಯಾಯ–೧

# ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ಕೆ.ಪಿ. ಪೂರ್ಣಚಂದ್ರ ತೇಜಸ್ವಿಯವರು ಕನ್ನಡದ ಪ್ರಮುಖ ನವ್ಯ ಬರಹಗಾರರಲ್ಲಿ ಒಬ್ಬರು. ಅಚ್ಚಗನ್ನಡ ಶೈಲಿಯಲ್ಲಿ ಎಂಥ ಜಟಿಲ, ತಾತ್ವಿಕ ವಿಷಯಗಳನ್ನಾದರೂ ನಿರೂಪಿಸಬಲ್ಲರು. ರಾಮಮನೋಹರಲೋಹಿಯಾ ಅವರ ಸಮಾಜವಾದಿ ಸಿದ್ಧಾಂತ, ಕುವೆಂಪು ಅವರ ಸೃಜನಶೀಲತೆ, ಶಿವರಾಮಕಾರಂತರ ಸಂಶೋಧನೆಗಳು ಇವರ ಕೃತಿಗಳಲ್ಲಿ ಹಾಸು ಹೊಕ್ಕಾಗಿದೆ. ತಮ್ಮ ಕೃತಿಗಳಲ್ಲಿ ನವ್ಯದ ಸಂಕೀರ್ಣತೆಯನ್ನು ಅನುಸರಿಸದೆ, ನವ್ಯರಿಗಿಂತ ಭಿನ್ನವಾಗಿ ಬರೆದರು. ಸರಳ ಭಾಷೆ, ನವಿರುಹಾಸ್ಯ, ಪತ್ತೇದಾರಿ ಶೈಲಿ ಅವರ ಬರವಣಿಗೆಯ ವೈಶಿಷ್ಟ್ಯವಾಗಿದ್ದವು.ಈ ನಿಟ್ಟಿನಲ್ಲಿ ಅವರ ಕಾದಂಬರಿಗಳು ಜನರ ಮನಸ್ಸಿನಲ್ಲಿ ಹಸಿರಾಗಿ ಉಳಿದಿದೆ.

ತೇಜಸ್ವಿ ಅವರು ಪರಿಸರ, ವಿಜ್ಞಾನ, ಜೀವಜಗತ್ತು, ಮನುಷ್ಯನ ಪಾಡು, ಜಾತಿಕಲಹ, ನೌಕರ ಶಾಹಿಯ ಭ್ರಷ್ಟಾಚಾರ, ಮಾನವತೆ ಮುಂತಾದ ಅಂಶಗಳನ್ನು ದಾಖಲಿಸಿದ್ದಾರೆ. ತೇಜಸ್ವಿ ಕೇವಲ ಸಾಹಿತ್ಯ ರಚನೆಗೆ ಸೀಮಿತವಾಗಿರದೆ, ವರ್ತಮಾನದ ಆಗು ಹೋಗುಗಳಿಗೆ ಸ್ಪಂದಿಸುತ್ತಿದ್ದರು. ವ್ಯವಸ್ಥೆಯ ವಿರುದ್ಧದ ಬಹುಪಾಲು ಚಳುವಳಿಗಳಲ್ಲಿ ಭಾಗಿಯಾಗಿದ್ದ ಇವರು ದೇಶವು ಎದುರಿಸುವ ಸಮಸ್ಯೆಯ ಕುರಿತು ಆಳವಾದ ಚಿಂತನೆ ನಡೆಸಿದವರು.

ತೇಜಸ್ವಿಯವರ ಬದುಕಿನ ಪ್ರಧಾನ ಅಂಶವೆಂದರೆ ಅವರಲ್ಲಿದ್ದ ಶೋಧನಾ ಪ್ರವೃತ್ತಿ ಮತ್ತು ಬದುಕಿನ ಬಗೆಗಿನ ವಿಸ್ಮಯ. ಈ ಪ್ರವೃತ್ತಿಯೇ ಅವರ ಕಾದಂಬರಿಗಳ ಚಲನೆಗೆ ವಿಶಿಷ್ಟತೆಯನ್ನು ಒದಗಿಸಿದೆ. ಬದುಕಿನ ನಿಗೂಢ ಸತ್ಯವನ್ನು ಹುಡುಕುವ ನಿರಂತರ ಪ್ರಕ್ರಿಯೆ ಅವರ ಕೃತಿಗಳಲ್ಲಿ ಒಡ ಮೂಡಿದೆ. ಮನುಷ್ಯನ ಮನಸ್ಸು, ಸನ್ನಿವೇಶ ಸಂದರ್ಭದ ಕಾರಣಗಳಿಂದ ವಿಭಿನ್ನವಾಗಿ ವರ್ತಿಸುವುದರಿಂದ ಉಂಟಾಗುವ ಸಾಮಾಜಿಕ ವಿಪರ್ಯಾಸಗಳನ್ನು ಅನ್ವೇಷಿಸುವ ಆಶಯ ಈ ಶೋಧನೆಯಲ್ಲಿದೆ.

ಸ್ವತಃ ಓರ್ವ ರೈತರಾಗಿದ್ದ ತೇಜಸ್ವಿಯವರು ರೈತರ ಸಮಸ್ಯೆಗಳು ಮತ್ತು ಆತ್ಮಹತ್ಯೆಗಳಿಂದ ಚಿಂತಿತರಾಗುತ್ತಿದ್ದರು. ಉದಾರೀಕರಣ ಅಥವಾ ಮುಕ್ತ ಆರ್ಥಿಕ ನೀತಿ ಕೃಷಿಕರ ಸಮಸ್ಯೆಗಳನ್ನು ಬಗೆಹರಿಸಲಾರವು ಎನ್ನುವುದು ಅವರ ನಂಬಿಕೆ ಆಗಿತ್ತು. ತೇಜಸ್ವಿಯವರು ತಮಗೆ ತೋಚಿದ್ದನ್ನು ನಿಷ್ಠುರವಾಗಿ ಹೇಳುವ ವ್ಯಕ್ತಿತ್ವದವರಾಗಿದ್ದರು. ತಮ್ಮ ವಾದವನ್ನು ಸೈದ್ಧಾಂತಿಕವಾಗಿ ದೃಷ್ಟಾಂತಗಳ ಮೂಲಕ ಸಮರ್ಥಿಸಿಕೊಳ್ಳುತ್ತಿದ್ದರು. 1974 ರಲ್ಲಿ ತೇಜಸ್ವಿ ಮತ್ತು ಅವರ ಸ್ನೇಹಿತರು ಸೇರಿಕೊಂಡು ಕರ್ನಾಟಕ ಬರಹಗಾರರ ಮತ್ತು ಕಲಾವಿದರ ಒಕ್ಕೂಟ ಎಂಬ ಸಂಘಟನೆಯನ್ನು ಪ್ರಾರಂಭಿಸಿದರು. ಈ ಸಂಘಟನೆಯಿಂದ ಹೊರ ಹೊಮ್ಮಿದ ಫಲಿತಾಂಶಗಳು ಅಪೂರ್ವವಾದುದಾಗಿವೆ. ನಂತರದ ರೈತ ಚಳುವಳಿ, ದಲಿತ ಚಳುವಳಿ ಮತ್ತು ಬಂಡಾಯ ಸಾಹಿತ್ಯ ಚಳುವಳಿಯ ಬೀಜಗಳು ಈ ಸಂಘಟನೆಯಲ್ಲಿ ಮೊಳಕೆಯೊಡೆಯಲಾರಂಭಿಸಿದವು. ನವ್ಯ ಸಾಹಿತ್ಯವು ಜನ ವಿಮುಖಿಯಾಗಿರುವುದನ್ನು ಅರಿತ ತೇಜಸ್ವಿಯವರು ಜನಪರ ಸಾಹಿತ್ಯವನ್ನು ರಚಿಸಬೇಕೆಂದು ಕರೆ ನೀಡಿದರು.

ಕುವೆಂಪು ತಮ್ಮ ಕವನಗಳಲ್ಲಿ ಶ್ರೀಸಾಮಾನ್ಯನನ್ನು ನಾಯಕನನ್ನಾಗಿ ಚಿತ್ರಿಸಿದರು. ಆದರೆ ಅವರು ತಮ್ಮ ಮಹಾಕಾವ್ಯಗಳಲ್ಲಿ ಪುರಾಣ ಪುರುಷರಿಗೆ ಪ್ರಾಮುಖ್ಯತೆ ನೀಡಿದರು. ಆದರೆ ತೇಜಸ್ವಿ ತಮ್ಮ ಸಮಸ್ತ ಕೃತಿಗಳಲ್ಲಿ ಶ್ರೀಸಾಮಾನ್ಯನನ್ನೇ ನಾಯಕನಾಗಿ ಚಿತ್ರಿಸಿದರು. ರಫಿ, ಅಂಗಾರ, ಗೂಗ್ಲಿ, ಸಿದ್ಧಪ್ಪ ಮುಂತಾದ ಹೆಸರುಳ್ಳ ಸಾಮಾನ್ಯ ಜನರ ಬದುಕಿನ ಚಿತ್ರಗಳ ಮೂಲಕ ಗ್ರಾಮೀಣ ಬದುಕಿನ ಸಂಕೀರ್ಣತೆಯನ್ನು ಅನಾವರಣಗೊಳಿಸುವ ಪ್ರಯತ್ನವನ್ನು ಮಾಡಿದ್ದಾರೆ. ಜುಗಾರಿಕ್ರಾಸ್ ಮತ್ತು ಚಿದಂಬರ ರಹಸ್ಯ ಕಾದಂಬರಿಗಳು ಜನಸಾಮಾನ್ಯರ ವಿಶಿಷ್ಟ ಪ್ರತಿಭಾ ಪೂರ್ಣ ಜೀವನವನ್ನು ಬಯಲು ಮಾಡುವ ಮೂಲಕ ಓದುಗರಿಗೆ ಹೊಸತನದ ಪರಿಚಯವನ್ನು ಮಾಡಿಸಿದರು.

ತೇಜಸ್ವಿಯವರ ಸಾಹಿತ್ಯ ಮತ್ತು ವ್ಯಕ್ತಿತ್ವವನ್ನು ಸರಿಯಾಗಿ ಅರ್ಥ ಮಾಡಿಕೊಂಡಾಗ ಮಾತ್ರ ಅವರ ಸಾಹಿತ್ಯ ಮತ್ತು ಸಾಹಿತ್ಯೇತರ ಬರವಣಿಗೆಯ ಯಾವುದೇ ಒಂದು ಆಶಯವನ್ನು ಇಟ್ಟುಕೊಂಡು ಬರೆದವು ಎಂಬ ಅರಿವು ನಮಗೆ ಉಂಟಾಗುತ್ತದೆ. ಸೃಜನಶೀಲ ಸಾಹಿತ್ಯ ಮತ್ತು ಸೃಜನೇತರ ಸಾಹಿತ್ಯ ಎರಡರಲ್ಲೂ ಸಾಮಾಜಿಕ ಕಾಳಜಿ, ವೈಚಾರಿಕ ಪ್ರಜ್ಞೆ ಹಾಗೂ ವೈಜ್ಞಾನಿಕ ಮನೋಧರ್ಮದ ಅಂಶವನ್ನು ತಿಳಿಸುತ್ತಾರೆ. ಸಾಹಿತ್ಯ ಕೃತಿಗಳಲ್ಲಿ ಈ ಅಂಶಗಳು ಕಲಾತ್ಮಕ ಅಭಿಪ್ರಾಯ ಪಡೆದಿದ್ದರೆ, ಸಾಹಿತ್ಯೇತರ ಕೃತಿಗಳಲ್ಲಿ ಗಾಢವಾದ ವೈಚಾರಿಕ, ವೈಜ್ಞಾನಿಕ, ಶೈಕ್ಷಣಿಕ ರೂಪವನ್ನು ಪಡೆದಿವೆ. ಈ ಕಾರಣದಿಂದಾಗಿಯೇ ಅಸಂಖ್ಯಾತ ಓದುಗರನ್ನು ಆಕರ್ಷಿಸಲು ಕಾರಣವಾಗಿದೆ.

ತೇಜಸ್ವಿಯವರು ಕಾದಂಬರಿಗಳಿಗೆ ಮಾತ್ರ ಸೀಮಿತವಾಗಿರದೆ, ಇನ್ನಿತರ ಕೃತಿಗಳಲ್ಲಿಯೂ ಅವರು ಬೇರೆ ಬೇರೆ ವಿಷಯಗಳ ಆಯಾಮವನ್ನು ನಿರೂಪಿಸಿದ್ದಾರೆ. ಆದುದರಿಂದ ಇದು ಶೈಕ್ಷಣಿಕ ಮಹತ್ವವನ್ನು ಕೂಡ ಪಡೆದುಕೊಂಡಿದೆ. ತೇಜಸ್ವಿಯವರಿಗೆ ಕುವೆಂಪು ಮತ್ತು ಶಿವರಾಮಕಾರಂತರು ಸಾಹಿತ್ಯ ರಚನೆಯ ಪ್ರೇರಕ ಶಕ್ತಿಗಳು ಆಗಿದ್ದರು. ಆದುದರಿಂದ ಅವರು ಬಾಲ್ಯದಿಂದಲೇ ಶೋಧನಾ ಪ್ರವೃತ್ತಿಯನ್ನು ಮೈಗೂಡಿಸಿಕೊಂಡಿದ್ದನ್ನು ಅವರ " ಅಣ್ಣನ ನೆನಪು " ಎಂಬ ಕೃತಿಯಲ್ಲಿ ಗುರುತಿಸಲು ಸಾಧ್ಯವಿದೆ.

ಮೈಸೂರಿನ ಮಾನಸ ಗಂಗೋತ್ರಿಯಲ್ಲಿ ಎಂ.ಎ ಪದವಿ ಪಡೆದ ತೇಜಸ್ವಿಯವರು ಕಾಲೇಜು ಅಥವಾ ವಿಶ್ವವಿದ್ಯಾಲಯಗಳಲ್ಲಿ ಉಪನ್ಯಾಸಕರಾಗಿ ಸೇವೆ ಸಲ್ಲಿಸಬಹುದಾಗಿತ್ತು. ಆದರೆ ಆ ವೃತ್ತಿಯನ್ನು ಆರಿಸಿಕೊಳ್ಳಲಿಲ್ಲ. ಬದಲಾಗಿ ಸ್ವತಂತ್ರ ಜೀವನ ಆರಂಭಿಸುವ ಸಲುವಾಗಿ ಕೃಷಿಯನ್ನು ಆಯ್ದುಕೊಂಡರು. ಈ ಕೃಷಿ ಜೀವನವೇ ಅವರು ಸಮಾಜವನ್ನು ಕುರಿತಾಗಿ ಇನ್ನಷ್ಟು ಅರಿತುಕೊಳ್ಳಲು, ಚಿಂತಿಸಲು ಸಾಧ್ಯವಾಗಿದೆ. ಇವರ ಸಾಹಿತ್ಯದಲ್ಲಿ ಕೃಷಿಗೆ ಸಂಬಂಧಿಸಿದ ಅನೇಕ ವಿಚಾರಗಳನ್ನು ನಮ್ಮ ಮುಂದೆ ಇಟ್ಟಿದ್ದಾರೆ. ಏಲಕ್ಕಿಬೆಳೆ, ಕಾಫಿಬೆಳೆ, ಜೇನು ವ್ಯವಸಾಯ, ಬೆಳೆಗಳಿಗೆ ಬರುವ ರೋಗಗಳು ಮತ್ತು ಅವುಗಳಿಗೆ ನೀಡುವ ಔಷಧಗಳ ವಿವರಗಳನ್ನು ನಾವು ಅವರ ಕೃತಿಗಳಲ್ಲಿ ಕಾಣುತ್ತೇವೆ. ಬರಿದಾಗುತ್ತಿರುವ ಕಾಡು, ಹಾಳಾಗುತ್ತಿರುವ ಪರಿಸರ ಮತ್ತು ಅದಕ್ಕೆ ಕಾರಣವಾಗಿರುವ ವ್ಯಕ್ತಿಗಳು ಮುಂತಾದ ವಿವರಗಳನ್ನು ತಮ್ಮ ಕೃತಿಗಳಲ್ಲಿ ನಿರೂಪಿಸುತ್ತಾರೆ.

ಪ್ರಾಣಿ ಪಕ್ಷಿಗಳಲ್ಲಿರುವ ಮುಗ್ಧತೆಯು ತೇಜಸ್ವಿಯವರಲ್ಲಿತ್ತು. ಆ ಕಾರಣಕ್ಕಾಗಿಯೇ ಕಾಡು ಅವರಿಗೆ ಮೆಚ್ಚಿಗೆಯ ತಾಣವಾಗಿತ್ತು. ಅವರಲ್ಲಿದ್ದ ಮುಗ್ಧತೆಯಿಂದಾಗಿ ಪ್ರಾಣಿ ಪಕ್ಷಿಗಳೊಂದಿಗೆ ಸಂವಾದಿಸುವ ಮನಸ್ಥಿತಿಯನ್ನು ಬೆಳೆಸಿಕೊಂಡಿದ್ದಾರೆ. ರಾಜಕಾರಣದ ಕಡು ವಿರೋಧಿಯಾಗಿದ್ದ ಇವರು ಅಧಿಕಾರ ಪ್ರಶಸ್ತಿಗಾಗಿ ಹಾತೊರೆಯಲಿಲ್ಲ. ಪ್ರಕೃತಿಯ ವಿಸ್ಮಯಗಳನ್ನು ಕಾಣುವುದರ ಜೊತೆಗೆ ಸಮಾಜದ ಅಂಕುಡೊಂಕುಗಳನ್ನು ಪರಿಶೀಲಿಸುತ್ತಿದ್ದರು ಎಂಬುವುದು ಉಲ್ಲೇಖನಿಯ. ತೇಜಸ್ವಿಯವರು ಸಾಹಿತಿಗಳೊಂದಿಗೆ ಮಾತ್ರವಲ್ಲದೇ ರೈತ ಸಂಘ ಮತ್ತು ದಲಿತ ಸಂಘರ್ಷ ಸಮಿತಿಗಳೊಂದಿಗೂ ಬಹುವರ್ಷಗಳ ಒಡನಾಟ ಹೊಂದಿದ್ದವರು.

ಪರಿಸರ ಮತ್ತು ವಿಜ್ಞಾನಿಗಳಿಂದ ಪ್ರೇರಣೆ ಪಡೆದ ತೇಜಸ್ವಿಯವರು ಹಿಂದಿನ ಸಾಹಿತ್ಯ ಪರಂಪರೆಗಿಂತ ಭಿನ್ನವಾಗಿ ಬರೆಯುತ್ತಾರೆ. ಸೃಷ್ಟಿಯ ನಿಗೂಢತೆಯಿಂದಾಗಿ ಪ್ರಕೃತಿಯಲ್ಲಿ ಜೀವಜಂತುಗಳು ಬದುಕುವ ಬಗೆಯನ್ನು ಕಲಾತ್ಮಕವಾಗಿ ತಮ್ಮ ಕೃತಿಗಳಲ್ಲಿ ನಿರೂಪಿಸುತ್ತಾ ಹೋಗುತ್ತಾರೆ. ಒಂದು ರೀತಿಯಲ್ಲಿ ಇದು ಸಾಹಿತ್ಯ ಆಸಕ್ತರಿಗೆ ಮಾತ್ರ ಸೀಮಿತವಾಗದೆ ಪರಿಸರ, ಸಮಾಜ, ವಿಜ್ಞಾನದ ಬಗ್ಗೆ ಕಾಳಜಿ ಇರುವ ಜನ ಸಾಮಾನ್ಯರಿಗೂ ಉಪಯುಕ್ತವಾಗುತ್ತದೆ. ಕೃಷಿ ತೋಟದಲ್ಲಿ ಆಸಕ್ತಿಯನ್ನು ಹೊಂದುವುದರಿಂದಲೇ ಅವರ ಸೃಜನಶೀಲ ಬರವಣಿಗೆಗೆ ಪ್ರೇರಕವಾಗುತ್ತದೆ. ಜೀವನಾನುಭವವನ್ನು ವಿಸ್ತಾರಗೊಳಿಸುತ್ತಲೇ ಬದುಕು ಮತ್ತು ಸಾಹಿತ್ಯಕ್ಕೆ ನಿಕಟ ಸಂಬಂಧವನ್ನು ಅವರು ಏರ್ಪಡಿಸಿ ಕೊಂಡವರು. ' ಚಿತ್ರಕೂಟ' ಎಸ್ಟೇಟ್‌ನಲ್ಲಿದ್ದಾಗ ' ಅಬಚೂರಿನ ಪೋಸ್ಟಾಫೀಸು', ' ನಿಗೂಢ ಮನುಷ್ಯರು' ' ಕರ್ವಾಲೋ' ಕೃತಿಗಳನ್ನು ಪ್ರಕಟಿಸಿದರೂ ೧೯೮೫ ರಲ್ಲಿ ' ಚಿದಂಬರ ರಹಸ್ಯ' ಕಾದಂಬರಿಯನ್ನು ಬರೆದದ್ದು ಈ ಪರಿಸರದಲ್ಲೇ.

ನಂತರ ಪರಿಸರದ ಕತೆ, ಸಹಜಕೃಷಿ, ಫ್ಲೇಯಿಂಗ್ ಸಾಸರ್ಸ್, ಏರೋಪ್ಲೇನ್ ಚಿಟ್ಟೆ ಮತ್ತು ಇತರ ಕತೆಗಳು, ಮಿಸ್ಸಿಂಗ್ ಲಿಂಕ್, ಕಾಡಿನ ಕತೆಗಳು, ವಿಸ್ಮಯ ಮಾಲಿಕೆಗಳು ಮುಂತಾದ ಕೃತಿಗಳನ್ನು ರಚಿಸಿದ್ದಾರೆ. ಪರಿಸರವನ್ನೇ ಪ್ರಧಾನ ನೆಲೆಯಾಗಿ ಮಾಡಿಕೊಂಡು ಸೃಷ್ಟಿಯ ನಿಗೂಢತೆ, ಕಾಡಿನ ವಿಶಿಷ್ಟಾನುಭವ, ಕೃಷಿಯ ಪ್ರಾಧಾನ್ಯತೆ, ಕೀಟ ಜಗತ್ತಿನ ಅದ್ಭುತ, ಜಗತ್ತಿನ ವಿಸ್ಮಯಗಳ ಬಗ್ಗೆ ಬೆರಗುಗೊಳಿಸುವ ಕಥಾನಕಗಳ ಮೂಲಕ ಕನ್ನಡದ ಓದುಗರಿಗೆ ಹೊಸದೊಂದು ಲೋಕವನ್ನೇ ತೆರೆದುಕೊಟ್ಟಿದ್ದಾರೆ. ಫೋಟೋಗ್ರಫಿ, ಮೀನುಗಾರಿಕೆ, ಜೇನು ಸಾಕಾಣಿಕೆ, ಚಿತ್ರಕಲೆ– ಸಂಗೀತ ಇತ್ಯಾದಿಗಳ ಬಗ್ಗೆಯೂ ಆಸಕ್ತಿ ಹೊಂದಿರುವ ತೇಜಸ್ವಿಯವರು, ಹೊಸ ಹೊಸ ಪ್ರಯೋಗಗಳ ಮೂಲಕ ಬದುಕನ್ನು ಶ್ರೀಮಂತಗೊಳಿಸುತ್ತಾ ಸಾಹಿತ್ಯ ರಚನೆ ಮಾಡುತ್ತಲೇ ಬಂದವರು.

ಹೀಗೆ ಈ ಎಲ್ಲಾ ಅಂಶಗಳನ್ನು ಗಮನದಲ್ಲಿಟ್ಟುಕೊಂಡಾಗ ತೇಜಸ್ವಿಯವರು ಇತರ ಲೇಖಕರಿಗಿಂತ ಭಿನ್ನವಾಗಿ ಕಾಣುತ್ತಾರೆ. ಈ ಕಾರಣದಿಂದಾಗಿ ಅಧ್ಯಾಯನ ಕಾರ್ಯವನ್ನು ಕೈಗೊಳ್ಳಲಾಗಿದೆ.

# ಅಧ್ಯಾಯ-೨

**ತೇಜಸ್ವಿ- ವ್ಯಕ್ತಿ ಚಿತ್ರಣ**:-ಪೂಚಂತೇ- ಎಂಬ ಕಾವ್ಯನಾಮದಿಂದ ಪ್ರಸಿದ್ಧರಾಗಿರುವ ಕೆ.ಪಿ. ಪೂರ್ಣಚಂದ್ರ ತೇಜಸ್ವಿಯವರು ಮಲೆನಾಡಿನ ಶಿವಮೊಗ್ಗದಲ್ಲಿ ಸೆಪ್ಟೆಂಬರ್ ೮, ೧೯೩೮ ರಲ್ಲಿ ಜನಿಸಿದರು. ರಾಷ್ಟ್ರಕವಿ ಕುವೆಂಪು ಮತ್ತು ಹೇಮಾವತಿಯವರ ಹಿರಿಯ ಮಗನಾಗಿ ಜನಿಸಿದ ಇವರು ಪ್ರಾಥಮಿಕ ಶಿಕ್ಷಣವನ್ನು ಶಿವಮೊಗ್ಗದಲ್ಲಿ ಮುಗಿಸಿಕೊಂಡು ಮುಂದಿನ ವ್ಯಾಸಂಗಕ್ಕಾಗಿ ಮೈಸೂರಿಗೆ ಬಂದರು. ಮೈಸೂರು ವಿಶ್ವವಿದ್ಯಾಲಯದಲ್ಲಿ ಬಿ.ಎ.ಆನರ್ಸ್ ಮತ್ತು ಕನ್ನಡ ಎಂ.ಎ. ಪದವಿಗಳನ್ನು ಪಡೆದುಕೊಂಡರು.

ಕುವೆಂಪುರವರ ಪ್ರಭಾವವಲಯಕ್ಕಷ್ಟೇ ತಮ್ಮನ್ನು ಸೀಮಿತ ಪಡಿಸಿಕೊಳ್ಳದ ತೇಜಸ್ವಿಯವರು ಸ್ವತಂತ್ರ ಪ್ರವೃತ್ತಿಯ ಮೂಲಕ ವಿಶಿಷ್ಟ ವ್ಯಕ್ತಿತ್ವ ಬೆಳೆಸಿಕೊಂಡರು. ಪರಿಸರ ಮತ್ತು ವಿಜ್ಞಾನಿಗಳಿಂದ ಪ್ರೇರಣೆ ಪಡೆದ ಕೆ.ಪಿ. ಪೂರ್ಣಚಂದ್ರ ತೇಜಸ್ವಿಯವರು ನಮ್ಮ ಹಿಂದಿನ ಸಾಹಿತ್ಯ ಪರಂಪರೆಗಿಂತ ಭಿನ್ನವಾದ ನೆಲೆಗಳನ್ನು ಕಂಡುಕೊಂಡವರು.

ತೇಜಸ್ವಿಯವರನ್ನು ಪ್ರಧಾನವಾಗಿ ಕಾಡಿರುವ ಅಂಶ ಸೃಷ್ಟಿಯ ನಿಗೂಢತೆ, ಜಗತ್ತಿನ ಜೀವ ರಾಶಿಗಳೆಲ್ಲ ಬದುಕುವ ಪ್ರಯತ್ನದಲ್ಲಿ ತೊಡಗುವ ಬಗೆ. ಈ ಪ್ರಯತ್ನವೇ ಒಂದು ವಿಸ್ಮಯವಾಗಿರುವಂತೆ ಕಟ್ಟಿಕೊಡುತ್ತಾರೆ. ಹಾಗೇ ಮನುಷ್ಯ ಪ್ರಜ್ಞೆ-ಸೃಷ್ಟಿಯ ನಿಗೂಢತೆಗಳನ್ನು ಅರ್ಥೈಸಿಕೊಳ್ಳುವಲ್ಲಿ ಹೆಣಗಾಡುವುದು, ಮನುಷ್ಯ ನಿರ್ಮಿತ ತಾರ್ಕಿಕತೆಗಳೆಲ್ಲ ಸೃಷ್ಟಿಯ ಸ್ವರೂಪದ ಮುಂದೆ ಬುಡ ಮೇಲಾಗುವುದನ್ನು ಕಲಾತ್ಮಕ ವಿವರಗಳಲ್ಲಿ ಕಟ್ಟಿ ಕೊಡುತ್ತಾರೆ. ಈ ಎಲ್ಲಾ ಕಾರಣಗಳಿಂದ ತೇಜಸ್ವಿಯವರ ಸಾಹಿತ್ಯ, ಸಾಹಿತ್ಯಾಸಕ್ತರಿಗಷ್ಟೇ ಸೀಮಿತವಾಗದೆ, ವಿಜ್ಞಾನ-ಸಮಾಜ-ಪರಿಸರಗಳ ಬಗ್ಗೆ ಕಾಳಜಿ ಇರುವವರಿಗೂ ತಿಳುವಳಿಕೆ ಮೂಡಿಸುತ್ತದೆ.

ವಿದ್ಯಾರ್ಥಿ ದೆಸೆಯಲ್ಲಿಯೇ 'ಲಿಂಗಬಂದ ' ಕತೆಗಳನ್ನು ಬರೆದರು. ಎಂ.ಎ. ಪದವಿಯ ನಂತರ ಅಧ್ಯಾಪಕರಾಗಲು ಇಚ್ಛಿಸದೆ, ಅಕೆಡೆಮಿಕ್ ವಾತಾವರಣ ಬಿಟ್ಟು ಪರಿಸರದೊಡನೆ ಪ್ರಯೋಗಶೀಲ ಬದುಕಿಗಾಗಿ ಹಾತೊರೆದರು. ಈ ನಡುವೆ ಶಾಂತವೇರಿ ಗೋಪಾಲಗೌಡರ ನೇತೃತ್ವದಲ್ಲಿ ಸಮಾಜವಾದಿ ಪಕ್ಷ, ಕರ್ನಾಟಕ ಲೋಹಿಯಾ ತತ್ತ್ವಚಿಂತನೆ ಮುಂತಾದ ರಾಜಕೀಯ ಸಂಘಟನೆಗಳಲ್ಲಿ ಭಾಗವಹಿಸಿ, ಪ್ರೊ.ಎಂ. ನಂಜುಂಡಸ್ವಾಮಿಯವರ ಒಡಗೂಡಿ ಲೋಹಿಯಾ ಚಿಂತನೆಗಳನ್ನು ಕನ್ನಡಕ್ಕೆ ಅನುವಾದಿಸಿದರು. ಮೈಸೂರಿನಲ್ಲಿ ತತ್ತ್ವಶಾಸ್ತ್ರ ವಿದ್ಯಾರ್ಥಿನಿಯಾಗಿದ್ದ ಆರ್. ರಂಗಪ್ಪ ಎಂಬವರ ಪುತ್ರಿ ಆರ್. ರಾಜೇಶ್ವರಿಯವರನ್ನು ೧೯೬೬ ರಲ್ಲಿ ವಿವಾಹವಾದರು. ಇವರದು ಅಂತರ್‌ಜಾತಿ ವಿವಾಹವಾಗಿದೆ. ತೇಜಸ್ವಿಯವರು ಚಿಕ್ಕಮಗಳೂರು ಜಿಲ್ಲೆಯ ಮೂಡಿಗೆರೆಯಲ್ಲಿ ನೆಲೆಸಿ ಕೃಷಿ ತೋಟದಲ್ಲಿ ಆಸಕ್ತಿ ತಳೆದರು. ಈ ಪರಿಸರ ಅವರ ಸೃಜನಶೀಲತೆಗೆ ಮತ್ತಷ್ಟು ಪ್ರೇರಕವಾಯಿತು.

೧೯೬೧ ರಲ್ಲೆ ತೇಜಸ್ವಿಯವರು ಯಾವುದೋ ಕಾಲೇಜಿನಲ್ಲಿ ಅಥವಾ ವಿಶ್ವವಿದ್ಯಾನಿಲಯದಲ್ಲಿ ಕನ್ನಡ ಉಪನ್ಯಾಸರಾಗಬಹುದಿತ್ತು. ಆದರೆ ಆ ಸಾಂಸ್ಥಿಕ ಚೌಕಟ್ಟಿನಲ್ಲಿ ಉಳಿಯಲು ಇಷ್ಟಪಡಲಿಲ್ಲ. ಸ್ವತಂತ್ರ ಪ್ರವೃತ್ತಿಯ ಅವರು ಸ್ವತಂತ್ರರಾಗಿಯೇ ಒಬ್ಬ ಕೃಷಿಕರಾಗಿರಲು ಅಪೇಕ್ಷಿಸಿದರು.

ಮೂಡಿಗೆರೆ ಚಿಕ್ಕಮಗಳೂರು ಜಿಲ್ಲೆಯ ತಾಲೂಕು ಕೇಂದ್ರ. ಇಲ್ಲಿಗೆ ಸಮೀಪದ ಜನ್ನಾಪುರದಲ್ಲಿ ೧೯೬೧ ರಲ್ಲಿ ಒಂದು ತೋಟ ಖರೀದಿಸಿ ತೇಜಸ್ವಿಯವರು ಅದಕ್ಕೆ 'ಚಿತ್ರಕೂಟ' ಎಂಬ ಹೆಸರಿಟ್ಟರು. ಈ ಪರಿಸರದಲ್ಲಿನ ಕೃಷಿತೋಟದಲ್ಲಿ ಆಸಕ್ತಿ ತಳೆದಿರುವುದು ಅವರ ಸ್ವತಂತ್ರ ಮನೋಧರ್ಮವನ್ನು ತೋರಿಸುತ್ತದೆ. ಇವರ ಸಾಹಿತ್ಯ ಕೃತಿಗಳು ಸ್ವತಃ ಬದುಕಿನಲ್ಲಿ ಹಾಸು ಹೊಕ್ಕಾದ ಚಿಂತನೆ ಅನುಭವಗಳ ಭಾಗಗಳೇ ಆಗಿವೆ.

ಕುವೆಂಪು ಅವರಿಗೆ ಮೈಸೂರು ಸರಕಾರ ೧೯೬೪ ರಲ್ಲಿ 'ರಾಷ್ಟ್ರಕವಿ' ಎಂಬ ಬಿರುದು ನೀಡಿ ಗೌರವಿಸಿತ್ತು. ಆದರೆ ತೇಜಸ್ವಿಯವರು ತಾನು ರಾಷ್ಟ್ರಕವಿಯ ಮಗನೆಂದು ಹಮ್ಮಿನಿಂದ ಬೀಗಿಕೊಂಡಿರಲಿಲ್ಲ. ಬದಲಾಗಿ ದೂರದ ಹಳ್ಳಿಯಲ್ಲಿ ಇದ್ದುಕೊಂಡು ತೋಟಗಾರಿಕೆ-ಕೃಷಿ ಮತ್ತು ಸಾಹಿತ್ಯದ ಕೃಷಿಯನ್ನು ಮಾಡತೊಡಗಿದರು. ಚಿತ್ರಕೂಟದಲ್ಲಿ ತೇಜಸ್ವಿಯವರು ೧೯೭೭ ರ ವರೆಗೆ ಇದ್ದರು. ಇವರಿಗೆ ಸುಶ್ಮಿತಾ ಮತ್ತು ಈಶಾನ್ಯ ಎಂಬ ಎರಡು ಹೆಣ್ಣುಮಕ್ಕಳು. ನಂತರ ೧೯೭೭ ರಲ್ಲಿ ಚಿತ್ರಕೂಟ ತೋಟ ಮಾರಾಟ ಮಾಡಿ ನಿಂಬೆ ಮೂಲೆಯಲ್ಲಿ ೧೯೭೮ ರಲ್ಲಿ ಸುಮಾರು ೨೫ ಎಕರೆ ಜಮೀನು ಖರೀದಿಸಿ 'ನಿರುತ್ತರ' ತೋಟ ಮಾಡಿದರು. ' ನಿರುತ್ತರ' ಮೂಡಿಗೆರೆ ಪಟ್ಟಣದಿಂದ ಸುಮಾರು ಒಂದೂವರೆ ಕಿ.ಮಿ ಅಂತರದಿಂದಿರುವುದರಿಂದಲೇ ತೇಜಸ್ವಿಯವರಿಗೆ ಮೂಡಿಗೆರೆಯ ಅಪಾರವಾದ ನಂಟು ಬೆಸೆಯಲು ಕಾರಣವಾಯಿತು. ಮೂಡಿಗೆರೆಯಲ್ಲಿ ತಮ್ಮ ಬೇಸಾಯದ ಕಾಯಕದೊಂದಿಗೆ ಇನ್ನಿತರ ಅನೇಕ ರೀತಿಯ ಹವ್ಯಾಸಗಳನ್ನು ಬೆಳೆಸಿಕೊಂಡರು. ಪರಿಸರ, ಹಕ್ಕಿ, ಪ್ರಾಣಿಗಳಿಗೆ ಸಂಬಂಧಿಸಿದ ಹಾಗೆ ಅವರು ರಚಿಸಿದ ರೇಖಾಚಿತ್ರಗಳನ್ನು ಕ್ಯಾಲೆಂಡರ್, ಪುಸ್ತಕ, ಪೋಸ್ಟರ್ ರೂಪದಲ್ಲಿ ಹೊರ ತಂದಿದ್ದಾರೆ. ಅಲ್ಲದೆ ಇವರು ಪೋಟೋಗ್ರಫಿ ಮತ್ತು ಕಂಪ್ಯೂಟರ್ ಕಲಿತರು. ಚಿತ್ರಗಾರರಾದರು. ಪಂಡಿತ ರವಿಶಂಕರ್ ಅವರಿಂದ ಸಿತಾರ್ ನುಡಿಸುವ ಕಲೆಯನ್ನು ಕಲಿತುಕೊಂಡರು.

ಒಬ್ಬ ಶ್ರೇಷ್ಠ ಸಾಹಿತಿಯಾಗಿ ತೇಜಸ್ವಿ ನಗರ ಜೀವನದಿಂದ ದೂರವಿದ್ದು, ಮೂಡಿಗೆರೆಯ ಕಾಡಿನಲ್ಲಿ ಮನೆ ಕಟ್ಟಿಕೊಂಡು ಜೀವಿಸಿದ್ದು, ಅಚ್ಚರಿಯ ಸಂಗತಿ ಆಗಿದೆ. ಇವರು ಮೀನು ಹಿಡಿಯುತ್ತಾ, ಮಲೆನಾಡಿನ ಕಾಡುಗಳಲ್ಲಿ ಅಲೆದಾಡುತ್ತಾ, ಛಾಯಾ ಚಿತ್ರಗಳನ್ನು ತೆಗೆಯುತ್ತಿದ್ದರು. ತಂದೆ ಕುವೆಂಪುರವರು ಪರಿಸರವನ್ನು ಆರಾಧಿಸಿದರೆ, ಪುತ್ರ ತೇಜಸ್ವಿಯವರು ಪರಿಸರವನ್ನು ವೈಜ್ಞಾನಿಕವಾಗಿ ವಿಶ್ಲೇಷಿಸಿದರು.

ತೇಜಸ್ವಿಯವರಿಗೆ ಬೇಟೆಯು ಒಂದು ಹವ್ಯಾಸವಾಗಿತ್ತು. ತಮ್ಮ ಬಿಡುವಿನ ಅವಧಿಯಲ್ಲಿ ಕೋವಿಯನ್ನು ಹೆಗಲಿಗೇರಿಸಿಕೊಂಡು ಬೇಟೆಯಾಡಲು ಕಾಡನ್ನು ಅಲೆಯುತ್ತಿದ್ದರು. ಈ ಸಂದರ್ಭದಲ್ಲಿ ವಿವಿಧ ಬಗೆಯ ಪ್ರಾಣಿ, ಪಕ್ಷಿಗಳ ಕಾರ್ಯಚಟುವಟಿಕೆಗಳನ್ನು ಬಹಳ ಹತ್ತಿರದಿಂದ ಅಧ್ಯಯನ ಮಾಡಿದರು. ಬೇಟೆಯಾಡುವುದು ಅವರಿಗೆ ಸಾವು ಬದುಕಿನ ಹೋರಾಟ.

ತೇಜಸ್ವಿಯವರು ಕೃಷಿಯನ್ನು ಪ್ರಮುಖ ವೃತ್ತಿಯಾಗಿ ಕೈಗೊಂಡದ್ದು ತಮ್ಮ ತಾತ ದೇವಂಗಿರಾಮಣ್ಣಗೌಡರ ಪ್ರಭಾವದಿಂದ ಎಂಬುವುದು ಉಲ್ಲೇಖನಿಯ. ಕೃಷಿ ಬದುಕೇ ಅವರ ಪ್ರಯೋಗ ಶೀಲತೆಗೂ ಕಾರಣವಾಗಿದೆ. ತೇಜಸ್ವಿಯವರ ಕೃತಿಗಳಲ್ಲಿ ಕೃಷಿ ಕಾರ್ಯ ಚಟುವಟಿಕೆಗೆ ಸಂಬಂಧಿಸಿದ ಅನೇಕ ವಿವರಗಳು ಕಂಡು ಬರುತ್ತದೆ. ಕಾಫಿಬೆಳೆ, ಜೇನು ಸಾಕಣೆ, ಏಲಕ್ಕಿಬೆಳೆ, ಬೆಳೆಗಳಿಗೆ ಬರುವ ರೋಗಗಳು ಮತ್ತು ಅವುಗಳ ಹತೋಟಿ ಮುಂತಾದ ವಿವರಗಳನ್ನು ತಾವು ಸ್ವತಃ ಕಂಡು ಅನುಭವಿಸಿ ಕೃತಿಗಳಲ್ಲಿ ಉಲ್ಲೇಖಿಸುತ್ತಾ ಹೋಗುತ್ತಾರೆ. ಅರಣ್ಯವು ನಾಶ ಹೊಂದುವುದು ಮತ್ತು ನಾಶ ಹೊಂದಲು ಕಾರಣವಾಗಿರುವ ವ್ಯಕ್ತಿಗಳನ್ನು ಕೂಡ ಗುರುತಿಸುತ್ತಾರೆ. ತೇಜಸ್ವಿಯವರೇ ಹೇಳುವಂತೆ, ಅವರ ಬರವಣಿಗೆಯ ಮೇಲೆ ಆಳವಾಗಿ ಪ್ರಭಾವ ಬೀರಿರುವುದು ಮೂರು ಅಂಶಗಳು. ಅವುಗಳೆಂದರೆ ರಾಮಮನೋಹರಲೋಹಿಯಾ ಅವರ ತತ್ತ್ವಚಿಂತನೆ, ಕುವೆಂಪು ಅವರ ಕಲಾಸೃಷ್ಟಿ, ಶಿವರಾಮ ಕಾರಂತರ ಜೀವನದ ಪ್ರಯೋಗಶೀಲತೆ ಮತ್ತು ಸಾಹಸ.

ತೇಜಸ್ವಿಯವರು ಸಂಶೋಧನೆಯಲ್ಲಿ ಆಸಕ್ತಿಯನ್ನು ಹೊಂದಿದ್ದರು. ಡಾ। ಎಚ್.ಎಂ ಮಹೇಶ್ವರಯ್ಯನವರು ಹೇಳಿರುವಂತೆ " ಪ್ರಕೃತಿ ಪರಿಸರಗಳ ನಿಗೂಢತೆಯ ಬಗೆಗೆ ಸಂಶೋಧನೆ ಮಾಡಿರುವ ಮಾನವಶಾಸ್ತ್ರ, ಇತಿಹಾಸ, ರಾಜಕೀಯ ಮುಂತಾದ ಜ್ಞಾನಶಾಖೆಗಳ ತಿಳುವಳಿಕೆಯನ್ನು ಹೊಂದಿರುವ ತೇಜಸ್ವಿಯವರು ತಮ್ಮ ಕೃತಿಗಳಲ್ಲಿ ಸಂಶೋಧಕನ ಸೂಕ್ಷ್ಮದೃಷ್ಟಿ, ವೀಕ್ಷಣಾಶಕ್ತಿ ಮತ್ತು ತಾರ್ಕಿಕ ಚಿಂತನೆಯ ಪರಿಯನ್ನು ಮೆರೆದಿದ್ದಾರೆ."[೧] ತೇಜಸ್ವಿ ಸಮಾಜವಾದಿ ಚಿಂತಕ ಶಾಂತವೇರಿ ಗೋಪಾಲಗೌಡರ ಕಟ್ಟಾ ಅನುಯಾಯಿ ಆಗಿದ್ದರು. ಲೋಕನಾಯಕ ಜಯಪ್ರಕಾಶ್ ನಾರಾಯಣರ ಸಂಪೂರ್ಣ ಕ್ರಾಂತಿಯಲ್ಲಿ ತಮ್ಮನ್ನು ತೊಡಗಿಸಿಕೊಂಡು ಕನ್ನಡದ ಮನಸ್ಸುಗಳಿಗೆ ಹೊಸ ತೇಜಸ್ಸನ್ನು ಕೊಟ್ಟರು. ಮುಲಾಜು ಮುಖವಾಡ ಇಲ್ಲದ ನೈಜಬುದ್ಧಿಜೀವಿಯಾಗಿದ್ದ ತೇಜಸ್ವಿಯವರು, ಜೀವನವನ್ನು ಪ್ರೀತಿಸಿದರು. ನಮ್ಮಲ್ಲಿರುವ ಉತ್ತಮ ಗುಣಗಳನ್ನು ತೋರಿಸುವುದಕ್ಕೆ ಮಾನವ ಜೀವನವು ಒಂದು ಅವಕಾಶ ಎಂದು ತಿಳಿದಿದ್ದರು.

ಕನ್ನಡ ನೆಲ, ಜಲಕ್ಕೆ ಧಕ್ಕೆ ಬಂದಾಗ ಸಿಡಿದೇಳುತ್ತಿದ್ದರು. ತಮ್ಮ ವಾದ ಮಂಡಿಸುವಾಗ ತಮ್ಮ ಆತ್ಮೀಯ ಮಿತ್ರರು ಎಂಬುವುದನ್ನು ನೋಡುತ್ತಿರಲಿಲ್ಲ.

ತಮ್ಮ ನಿಲುವನ್ನು ಸಮರ್ಥಿಸಿಕೊಳ್ಳುತ್ತಿದ್ದರು. ಕನ್ನಡದ ವಿರುದ್ಧ ಮಾತನಾಡಿದ ಬೆಳಗಾವಿ

ಮೇಯರ್ ಮೋರೆಯವರ ಮುಖಕ್ಕೆ ಕರ್ನಾಟಕ ರಕ್ಷಣಾ ವೇದಿಕೆ ಕಾರ್ಯಕರ್ತರು ಮಸಿ ಬಳಿದಾಗ ಸ್ವಾಗತಿಸಿದ ತೇಜಸ್ವಿಯವರು "ಕನ್ನಡ ದ್ರೋಹಿ ಮುಖಕ್ಕೆ ಮಸಿ ಬಳಿಯದೆ ಫೇರ್ ಅಂಡ್ ಲವ್‌ಲೀ ಹಚ್ಬೇಕಾಗುತ್ತಾ"[೨] ಎಂದು ಪ್ರತಿಕ್ರಿಯಿಸಿದರು. ನಿಷ್ಠುರವಾದಿಯಾಗಿದ್ದ ತೇಜಸ್ವಿಯವರು ಹಲವರ ಪಾಲಿಗೆ ಕಹಿಯಾಗಿದ್ದರೂ ಅವರ ವಿಚಾರಧಾರೆಗೆ ಎಂದೂ ಚ್ಯುತಿ ಬರಲಿಲ್ಲ. ಯಾವುದೇ ರೀತಿಯ ಪಂಥವನ್ನು ಕಟ್ಟಿಕೊಳ್ಳದ ತೇಜಸ್ವಿಯವರು ಸರ್ವಜನ ಪ್ರಿಯರು ಆಗಿದ್ದಾರೆ.

ಯಾವುದೇ ರೀತಿಯ ತಂತ್ರಜ್ಞಾನ ಪ್ರವೇಶಿಸಿದಾಗಲೂ ಕುತೂಹಲ ಹೊಂದುತ್ತಿದ್ದರು. ಕಳೆದ ಶತಮಾನದ ಕೊನೆಯ ದಶಕದಲ್ಲಿ ಜಾಗತೀಕರಣ ಒಂದು ಚಳವಳಿಯಂತೆ ರೂಪುಗೊಂಡಿತು. ಇದನ್ನು ಹಲವರು ವಿರೋಧಿಸಿದರೂ ತೇಜಸ್ವಿಯವರು ಜಾಗತೀಕರಣ ವಿರೋಧಿಸುವುದನ್ನು ಒಪ್ಪಲಿಲ್ಲ. ಇದರ ಕುರಿತಾಗಿ ತೇಜಸ್ವಿಯವರು ಈ ರೀತಿಯಾಗಿ ತಿಳಿಯಪಡಿಸುತ್ತಾರೆ.

"ಜಾಗತೀಕರಣ ಯುಗಧರ್ಮ ಅದನ್ನು ವಿರೋಧಿಸುವುದು ಸರಿಯಲ್ಲ. ಹೊಸ ಸವಾಲುಗಳಿಗೆ ಸಮಾಜವನ್ನು ಅಣಿಗೊಳಿಸಬೇಕು. ಜಗತ್ತು ಆಧುನಿಕತೆಯತ್ತ ಸಾಗುತ್ತಿದೆ. ಭಾರತವು ಆ ಮಾರ್ಗದಲ್ಲಿ ಸಾಗದಿದ್ದರೆ ಅಭಿವೃದ್ಧಿಗೆ ವಿಮುಖರಾಗಬೇಕಾಗುತ್ತದೆ."[೩] ಮಾನವನು ತನ್ನ ಬಹಳಷ್ಟು ಕೆಲಸವನ್ನು ಕಂಪ್ಯೂಟರ್ ನೆರವಿನಿಂದ ಮಾಡಿಕೊಳ್ಳತ್ತಾ ಬಂದಿದ್ದಾನೆ. ಪ್ರತಿಯೊಂದು ತಂತ್ರಜ್ಞಾನದ ಆವಿಷ್ಕಾರವಾದಾಗಲೂ ಮನುಷ್ಯ ಅದನ್ನು ಸ್ವಾಗತಿಸುತ್ತ ಬಂದಿರುವಾಗ ಕಂಪ್ಯೂಟರ್ ಬೇಡ ಎನ್ನಲಾಗದು. ಮುದ್ರಣ ಕ್ಷೇತ್ರದಲ್ಲಿ ಕಂಪ್ಯೂಟರ್ ಒಂದು ಕ್ರಾಂತಿಯನ್ನೆ ಮಾಡಿದೆ. ತೇಜಸ್ವಿಯವರು ಹಳ್ಳಿಯಲ್ಲಿದ್ದರೂ ಕಂಪ್ಯೂಟರ್ ಕಲಿತುಕೊಂಡರು. ಕುವೆಂಪುರವರ ಅನೇಕ ಕೃತಿಗಳನ್ನು ಕಂಪ್ಯೂಟರೀಕರಣಗೊಳಿಸುವ ಮೂಲಕ ಕನ್ನಡ ಸಾಹಿತ್ಯ ಲೋಕದಲ್ಲಿ ಹೊಸತನ ತಂದರು. ಮತ್ತು ಕನ್ನಡವನ್ನು ಕಂಪ್ಯೂಟರಿಗೆ ಅಳವಡಿಸುವ ವಿಚಾರದಲ್ಲಿ ಸಾಕಷ್ಟು ಕೆಲಸ ಮಾಡಿದರು. ಎದುರಾದ ಕಷ್ಟಗಳನ್ನು ನಿವಾರಿಸುವಲ್ಲಿ ಶ್ರಮಿಸಿದರು.

ತೇಜಸ್ವಿಯವರು ಸಮಾಜ ಮುಖಿಯಾಗಿ ಕೆಲಸ ಮಾಡಿದವರು. ಸಾಮಾಜಿಕ ಕಳಕಳಿಯನ್ನು ಹೊಂದಿದವರು. ಈ ನಿಟ್ಟಿನಿಂದ ಸಮಾಜವನ್ನು ಬಹು ಹತ್ತಿರದಿಂದ ನೋಡಿದವರು. ಸಮಾಜದಲ್ಲಿರುವ ಮೂಢನಂಬಿಕೆ, ಆಷಾಡಭೂತಿನಡವಳಿಕೆ, ಶೋಷಣೆ ಮತ್ತು ಸಭ್ಯತೆಯ ಸೋಗನ್ನು ಖಂಡಿಸಿದರು. ನಮ್ಮ ಸಂಸ್ಕೃತಿ ಮತ್ತು ಪರಿಸರವನ್ನು ವಿಕೃತಗೊಳಿಸುತ್ತಾ ಬಂದ ಸಾಮಾಜಿಕ, ರಾಜಕೀಯ ಭ್ರಷ್ಟ ವ್ಯವಸ್ಥೆಯ ವಿರುದ್ಧ ಧ್ವನಿ ಎತ್ತಿದವರು. ಇಂತಹ ಜನ ಜಾಗೃತಿಯು ಸಮಾಜದ ಆಂತರ್ಯದಲ್ಲಿ ಹುಟ್ಟದಿದ್ದರೆ ಈ ಭ್ರಷ್ಟ ವ್ಯವಸ್ಥೆಯನ್ನು ಬದಲಿಸುವುದು ಕಷ್ಟ ಎಂಬುವುದನ್ನು ಮನಗಂಡಿದ್ದರು. ವರ್ಣ, ವರ್ಗದ ಹೆಸರಿನಲ್ಲಿ ನಡೆಯುವ ತಾರತಮ್ಯದ ವಿರೋಧಿಯಾಗಿದ್ದರು.
ತಮ್ಮ ವಿಚಾರಗಳನ್ನು ವ್ಯಕ್ತಪಡಿಸುವ ಸಂದರ್ಭದಲ್ಲಿ ಇತರರ ಅಭಿಪ್ರಾಯಗಳನ್ನು

ಸಾವಧಾನದಿಂದ ಆಲಿಸುತ್ತಿದ್ದರು. ೧೯೭೪ ರಲ್ಲಿ ತಮ್ಮ ಗೆಳೆಯರೊಂದಿಗೆ ಅವರು ಸಂಘಟಿಸಿದ ಕರ್ನಾಟಕ ಬರಹಗಾರರ ಮತ್ತು ಕಲಾವಿದರ ಒಕ್ಕೂಟ ಕರ್ನಾಟಕ ಸಾಂಸ್ಕೃತಿಕ ಲೋಕದ ಒಂದು ಮೈಲುಗಲ್ಲಾಗಿದೆ. ಎಪ್ಪತ್ತು ಮತ್ತು ಎಂಬತ್ತರ ಆದಿಭಾಗದಲ್ಲಿ ರಾಜ್ಯದ ಜನಪರ ಚಳವಳಿಗಳಲ್ಲಿ ಗುರುತಿಸಿಕೊಂಡ ತೇಜಸ್ವಿ ನಂತರ ಚಳುವಳಿಗಳಿಂದ ದೂರ ಸರಿದರು. ಕನ್ನಡ ನಾಡಿನ ಯುವ ಜನಾಂಗಕ್ಕೆ ಜ್ಞಾನವಾಹಿನಿಯನ್ನು ತಮ್ಮ ಮಿಲೇನಿಯಂ ಸರಣಿಯ ಕೃತಿಗಳ ಮೂಲಕ ರವಾನಿಸುವ ಕಾಯಕದಲ್ಲಿ ತೊಡಗಿದರು.

ಪರಿಸರವಾದಿಯಾಗಿದ್ದ ತೇಜಸ್ವಿಯವರು ಪಶ್ಚಿಮ ಘಟ್ಟಗಳ ಸಂರಕ್ಷಣೆಗಾಗಿ ಹೋರಾಡಿದರು. ಕುದುರೆಮುಖ ಕಬ್ಬಿಣ ಅದಿರು ಕಂಪೆನಿಯ ವಿರುದ್ಧ ಹೋರಾಡಿದರು. ಪ್ರಕೃತಿಯ ಸೊಬಗನ್ನು ಸೂಕ್ಷ್ಮವಾಗಿ ಗಮನಿಸುವುದರಲ್ಲಿ ನಿಷ್ಣಾತರಾಗಿದ್ದರು. ಕ್ಷಣಕ್ಷಣಕ್ಕೂ ಬದಲಾಗುತ್ತಿರುವ ಸನ್ನಿವೇಶಗಳನ್ನು ಛಾಯಾಗ್ರಹಣದ ಮೂಲಕ ಸೆರೆಹಿಡಿದು ಸ್ಥಿರಗೊಳಿಸುವ ಕಲೆ ಅವರಿಗೆ ಸಿದ್ಧಿಸಿತ್ತು. ಕುವೆಂಪು ಅವರು ' ಮಲೆನಾಡಿನ ಚಿತ್ರಗಳು' ಎಂಬ ತಮ್ಮ ಕೃತಿಗಳಲ್ಲಿ ಮಲೆನಾಡಿನ ದಟ್ಟ ಅನುಭವಗಳನ್ನು ತಿಳಿಸುತ್ತಾರೆ. ಹಾಗೆಯೇ ತೇಜಸ್ವಿಯವರು ಕೂಡ ತಮ್ಮ ಬರಹದಲ್ಲಿ ಅನುಭವಗಳನ್ನು ಅತ್ಯಂತ ರಮಣೀಯವಾಗಿ ವರ್ಣಿಸುತ್ತಾರೆ. ಕಾಡು, ನದಿ, ಬೆಟ್ಟ, ಗುಡ್ಡ, ತೊರೆ ಮುಂತಾದುವು ತೇಜಸ್ವಿಯವರಿಗೆ ಹತ್ತಿರವಾದವುಗಳು. ತಮ್ಮ ಕ್ಯಾಮೆರಾದಿಂದ ಪ್ರಕೃತಿಯ ವಿಸ್ಮಯ ಜಗತ್ತನ್ನು ಸೆರೆ ಹಿಡಿಯುತ್ತಿದ್ದರು. ಪ್ರಕೃತಿಯನ್ನು ಇಷ್ಟೊಂದು ಹಚ್ಚಿಕೊಂಡವರಲ್ಲಿ ಶಿವರಾಮ ಕಾರಂತರ ನಂತರ ಕನ್ನಡ ಲೇಖಕರಲ್ಲಿ ತೇಜಸ್ವಿಯವರು ಒಬ್ಬರೇ ಎನ್ನಬಹುದು. ಪರಿಸರ ಪ್ರೇಮ ಬೆಳೆಸಿಕೊಂಡ ತೇಜಸ್ವಿ ಪರಿಸರವಾದಿಯಾಗಿಯೂ ಮೆರೆದರು. ಬಹುಮುಖ ಪ್ರತಿಭೆ, ಬಹುಮುಖಿ ಆಸಕ್ತಿ ಇದು ತೇಜಸ್ವಿಯವರ ವೈಶಿಷ್ಟ್ಯ ಆಗಿದೆ.

ಆಧುನಿಕ ಕನ್ನಡ ಸಾಹಿತ್ಯದಲ್ಲಿ ಕುವೆಂಪು ಮತ್ತು ತೇಜಸ್ವಿಯವರ ಹೆಸರು ಚಿರಸ್ಥಾಯಿ. ಇವರಿಬ್ಬರೂ ಕೂಡ 'ಕೇಂದ್ರ ಸಾಹಿತ್ಯ ಅಕಾಡೆಮಿ' ಮತ್ತು 'ಪಂಪ ಪ್ರಶಸ್ತಿ' ಪುರಸ್ಕೃತರು. ನಿಸರ್ಗದಲ್ಲಿ ಪ್ರೀತಿ–ಒಲವನ್ನು ಹೊಂದಿದವರು. ಮಲೆನಾಡಿನ ಸೌಂದರ್ಯವನ್ನು ಚಿತ್ರಿಸುವುದರಲ್ಲಿ ತಂದೆ–ಮಗ ಇಬ್ಬರು ಯಶಸ್ವಿಯಾದವರು. ಈ ನಿಟ್ಟಿನಲ್ಲಿ ಕುವೆಂಪು ಅವರಿಗೆ ಪ್ರಕೃತಿಯೇ ತಪಸ್ಸು ಆಗಿತ್ತು. ಮತ್ತು ಅದನ್ನು ಆರಾಧಿಸಿದರು. ತೇಜಸ್ವಿಯವರು ಇದಕ್ಕೆ ತದ್ವಿರುದ್ಧ. ಇವರು ಪ್ರಕೃತಿಯನ್ನು ಕಂಡು ಚಕಿತರಾಗುತ್ತಾರೆ. ಮತ್ತು ವಿಸ್ಮಿತರಾಗುತ್ತಾರೆ ಮತ್ತು ಸೃಷ್ಟಿಯ ರಹಸ್ಯ ತಿಳಿಯಲು ಉತ್ಸುಕರಾಗುತ್ತಾರೆ.

ಕುವೆಂಪುರವರು ವಿಶ್ವವಿದ್ಯಾನಿಲಯದ ಉಪಕುಲಪತಿಗಳು ಆಗುವವರೆಗೆ ಮೇಲೇರಿದರು. ಆದರೆ ತೇಜಸ್ವಿಯವರಿಗೆ ವಿಶ್ವವಿದ್ಯಾನಿಲಯದ ಸಹವಾಸವೇ ಬೇಡವಾಯಿತು. ತಮ್ಮ ಜೀವನವನ್ನು ಕೃಷಿ ಮತ್ತು ಸಾಹಿತ್ಯಕ್ಕೆ ಮೀಸಲಿಟ್ಟರು.

ಕುವೆಂಪುರವರ ಮೇಲೆ ಹೆಚ್ಚು ಪ್ರಭಾವವನ್ನು ಬೀರಿದವರು ರಾಮಕೃಷ್ಣ ಪರಮಹಂಸರು ಹಾಗೂ ಸ್ವಾಮಿ ವಿವೇಕಾನಂದರು. ಆದ್ದರಿಂದಲೇ ಅವರು ಒಂದು ರೀತಿಯಲ್ಲಿ ಆಧ್ಯಾತ್ಮಿಕತೆಯತ್ತ ಒಲವು ತೋರಿದರು. ತೇಜಸ್ವಿಯವರು ಹೆಚ್ಚು ವೈಜ್ಞಾನಿಕ ಮನೋಭಾವ ಉಳ್ಳವರಾಗಿ ಕಂಪ್ಯೂಟರ್, ಛಾಯಾಚಿತ್ರಗ್ರಹಣ, ಕೃಷಿ, ಬೇಟೆ, ಸಾಹಿತ್ಯ ಮುಂತಾದ ಹತ್ತು ಹಲವು ಹವ್ಯಾಸಗಳನ್ನು ಮೈಗೂಡಿಸಿಕೊಂಡಿದ್ದರು.

ತೇಜಸ್ವಿಯವರು ಜೀವನದ ಕಠೋರ ಸತ್ಯವನ್ನು ವಿಸ್ಮಯದಿಂದ ನೋಡುವ ಅವರ ದೃಷ್ಟಿ ಕನ್ನಡ ಸಾಹಿತ್ಯದಲ್ಲಿಯೇ ವಿಶಿಷ್ಟವಾದುದು. ಹೊಸತನದ ಅನ್ವೇಷಣೆಯಲ್ಲಿ ತೊಡಗಿ ಹೊಸ ರೀತಿಯ ಸಾಹಿತ್ಯ ಸೃಷ್ಟಿಸಿದ ಅಪರೂಪದ ಲೇಖಕರಾಗಿದ್ದಾರೆ. ಕನ್ನಡದ ಬಗ್ಗೆ ಅಪಾರ ಕಾಳಜಿ ಮತ್ತು ಕಳಕಳಿ ಹೊಂದಿದ್ದರು. ಕನ್ನಡದಲ್ಲಿ ಹೊಸತನವನ್ನು ಕಂಡುಕೊಳ್ಳುವ ಪ್ರಯತ್ನ ಮಾಡಿದರು. ಯಾರೇ ಆಗಲಿ ಕ್ರಿಯಾತ್ಮಕವಾಗಿ ಯೋಚಿಸಬೇಕು ಎನ್ನುತ್ತಿದ್ದ ಅವರು, ಕನ್ನಡ ಕೇವಲ ಘೋಷಣೆಗಳಿಂದ ಉದ್ಧಾರ ಆಗುವುದಿಲ್ಲ ಎಂಬುವುದನ್ನು ಮನಗಂಡಿದ್ದರು. ಧೀರ, ಗಂಭೀರ ನಿಲುವು ಹೊಂದಿದ್ದ ತೇಜಸ್ವಿ, ಬದುಕಿನ ನಿಗೂಢ ಸತ್ಯವನ್ನು ಶೋಧಿಸುವ ಪ್ರವೃತ್ತಿಯನ್ನು ಹೊಂದಿದ್ದರು. ವೈಜ್ಞಾನಿಕ ವಿಚಾರಗಳನ್ನು ನಾಲ್ಕು ಗೋಡೆಗಳ ಮಧ್ಯೆ ಹೇಳುವುದಕ್ಕಿಂತ ಸ್ವ-ಅನುಭವಗಳೊಂದಿಗೆ ಸಂಯೋಜಿಸಿ ಜೀವನ ಸಂದರ್ಭಗಳಲ್ಲಿ ಹೇಳಿದಾಗ ಎಂಥ ಕ್ಲಿಷ್ಟ ವಿಚಾರವಾದರೂ ಸುಲಭವಾಗಿ ಅರ್ಥವಾಗುತ್ತದೆ ಎಂಬ ವಿಚಾರದಲ್ಲಿ ಅವರಿಗೆ ವಿಶ್ವಾಸವಿತ್ತು.

ತೇಜಸ್ವಿಯವರು ನವ್ಯ ಮಾರ್ಗದಲ್ಲಿ ತಮ್ಮ ಬರವಣಿಗೆಯನ್ನು ಆರಂಭಿಸಿದರೂ, ಆ ಮಾರ್ಗವನ್ನು ಧಿಕ್ಕರಿಸುತ್ತಾರೆ. ಅದಕ್ಕೆ ಮೂರು ಕಾರಣಗಳನ್ನು ಕೂಡ ಕೊಡುತ್ತಾರೆ. ಮೊದಲನೆಯ ಕಾರಣ ನವ್ಯ ಮಾರ್ಗದ ಸಾಂಕೇತಿಕ ಶೈಲಿ ಮತ್ತು ತಂತ್ರಗಳು. ಎರಡನೆಯದು, ಉಪಾಧ್ಯಾಯರಿಂದಲೇ ಆಗುವ ಸಾಹಿತ್ಯ ಸೃಷ್ಟಿ. ಮೂರನೆಯದು ಕೇವಲ ಸಾಹಿತ್ಯದ ಮಟ್ಟಿಗೇ ಸೀಮಿತಗೊಂಡ ಕ್ರಾಂತಿಕಾರಿತನ. ನವ್ಯಮಾರ್ಗದ ಕೊನೆಯ ಘಟ್ಟವನ್ನು ತಲುಪಿ ಹೊಸದೊಂದು ಮಾರ್ಗ ಆವಿಷ್ಕಾರಗೊಳ್ಳುತ್ತಿರುವ ಈ ಸಂಕ್ರಮಣ ಸ್ಥಿತಿಯಲ್ಲಿ ತೇಜಸ್ವಿಯವರ ಕಾರಣಗಳು ನಮಗೆ ಹೆಚ್ಚು ಸ್ಪಷ್ಟವಾಗುತ್ತದೆ.

ನವ್ಯ ಮಾರ್ಗದ ಅನೇಕ ಸಾಹಿತ್ಯ ಕೃತಿಗಳು ಓದುಗ ವಲಯವನ್ನು ಸಂಕುಚಿತಗೊಳಿಸುವುದಕ್ಕೆ ಬೇರೆ ಕಾರಣಗಳು ಇವೆಯಾದರೂ ಮುಖ್ಯ ಕಾರಣ ಈ ಸಾಂಕೇತಿಕ ಶೈಲಿ ಮತ್ತು ತಂತ್ರಗಳು. ಕೇವಲ ಅಧ್ಯಾಪಕರು ಮಾತ್ರ ಸಾಹಿತ್ಯ ಸೃಷ್ಟಿಯಲ್ಲಿ ತೊಡಗಿ, ಸೃಷ್ಟಿಯನ್ನು ತಮ್ಮ ಕುಲ ಕಸುಬಿನಂತೆ ಮಾಡಿಕೊಳ್ಳುತ್ತಿದ್ದಾರೆಂದು ತೇಜಸ್ವಿ ರೇಗಿದ್ದು, " ಕೇವಲ ಒಂದು ವರ್ಗದ ಜನ ಮಾತ್ರ ತೊಡಗಿದ ಸಾಹಿತ್ಯ ಕೃತಿಗಳು ಏಕತಾನದಿಂದ ಓದುಗರನ್ನು ಕಳೆದುಕೊಳ್ಳುತ್ತವೆ"[೪] ಎನ್ನುವ ಕಾರಣದ ಜೊತೆಗೆ "ಸಾಹಿತ್ಯ ಇಡಿಯ ಒಂದು ಭಾಷಾ ಸಮುದಾಯದ ಅಭಿವ್ಯಕ್ತಿಯಾಗಿ ವೈವಿಧ್ಯತೆಯನ್ನು

ಸಮೃದ್ಧಿಯನ್ನು ಪಡೆದುಕೊಳ್ಳಬೇಕು".[೫] ಎನ್ನುವ ಕಾಳಜಿಯನ್ನು ಹೊಂದಿದ್ದರು. ಅವರು ನೀಡಿದ ಮೂರನೆಯ ಕಾರಣ ಸಾಹಿತ್ಯದ ಮಟ್ಟಿಗೇ ಸೀಮಿತಗೊಂಡ ಕ್ರಾಂತಿಕಾರಿತನವು ಹೇಗೆ ಭಾಷೆ, ಜಾತಿ ಪದ್ಧತಿ, ತತ್ತ್ವಚಿಂತನೆ, ರಾಜಕೀಯ ಆಂದೋಲನ ಮುಂತಾದ ಉಳಿದ ಕ್ಷೇತ್ರಗಳಿಗೂ ಹಬ್ಬದೆ ಹೋಗುತ್ತದೆ. ಹೀಗೆ ಒಂದು ಮಾರ್ಗದ ಶ್ರೇಷ್ಠಗುಣಗಳನ್ನು ಅರಗಿಸಿಕೊಂಡು, ಕುಬ್ಜ ಘಟ್ಟಗಳನ್ನು ಗುರುತಿಸಿ ಬೇರೊಂದು ಹೊಸ ಮಾರ್ಗದ ಅನ್ವೇಷಣೆಯಲ್ಲಿ ತೇಜಸ್ವಿಯು ಹೊರಟಿದ್ದರು.

" ಒಂದು ಶ್ರೇಷ್ಠ ಸಾಹಿತ್ಯ ಕೃತಿಯನ್ನು ನಿರ್ಧರಿಸಲು ಸಾಹಿತ್ಯೇತರ ಮಾನದಂಡ ಕೂಡ ಅಗತ್ಯ"[೬] ಎಂದು ಟಿ.ಎಸ್. ಎಲಿಯಟ್ ಹೇಳಿದ್ದು ಕೃತಿ ಮತ್ತು ಕೃತಿಕಾರನ ಸಂಬಂಧವನ್ನು ಸೂಚಿಸುವಂಥದ್ದು. ಪ್ರತಿಭಟನೆ, ವಿಚಾರ, ಕ್ರಿಯೆಗಳನ್ನು ಅದರ ಹಿಂದಿರುವ ಮಾನವೀಯ ತುಡಿತವನ್ನು ಗ್ರಹಿಸುವಲ್ಲಿ ಸಫಲನಾದ ಕೃತಿಕಾರ ಒಂದಕ್ಕೊಂದು ಎಳೆಯನ್ನು ಗುರುತಿಸುತ್ತ, ಬದುಕಿನ, ವಿಚಾರದ ಆಯಾಮಗಳೆಲ್ಲವನ್ನು ಒಳಪಡಿಸಿಕೊಂಡ ಸಮಗ್ರ ಕೃತಿಯನ್ನು ಅಖಂಡ ಅನುಭವವನ್ನು ಕೊಡಲು ಶಕ್ತನಾಗಿರುತ್ತಾನೆ.

ತೇಜಸ್ವಿಯವರು ' ಹೊಸ ದಿಗಂತದ ಕಡೆಗೆ ' ( ಅಬಚೂರಿನ ಪೋಸ್ಟಾಫೀಸು ಸಂಕಲನದ ಮುನ್ನುಡಿಯಲ್ಲಿ) ಹೇಳಿದ ಮಾತುಗಳಲ್ಲಿ ಈ ಅಂಶವನ್ನು ಗುರುತಿಸಬಹುದು. ಅವೆಂದರೆ ೧. ಸರಳವಾಗಿ, ನೇರವಾಗಿ ವೀಕ್ಷಿಸಿ ದಾಖಲಿಸುವ ಶಿಸ್ತು.
೨. ಅನ್ಯ ಕ್ಷೇತ್ರದ ವ್ಯಕ್ತಿಗಳು ಸಾಹಿತ್ಯ ಕ್ಷೇತ್ರದಿಂದ ಸಂಕೋಚಗೊಂಡು ಓಡುವಂತೆ ಮಾಡಿದ ಸಾಹಿತ್ಯ ಪದ್ಧತಿಯನ್ನುತಿರಸ್ಕರಿಸುವುದು ಈ ಎರಡು ಸಂಗತಿಗಳು ಕೂಡ ಓದುಗನ ಇರುವನ್ನು ಸಾಹಿತ್ಯದಲ್ಲಿ ಪ್ರಾಮುಖ್ಯಗೊಳಿಸುವ ಮೂಲಕ ಕೃತಿಯ ಪ್ರಾಯೋಗಿಕತೆಗೆ ಮಹತ್ವ ಕೊಟ್ಟಿದ್ದಾರೆ.

ತೇಜಸ್ವಿ ಪ್ರಕೃತಿಯನ್ನು ಹಿನ್ನೆಲೆಯಾಗಿಟ್ಟುಕೊಂಡು ಕತೆ, ಕಾದಂಬರಿ ಬರೆದರು ಎಂದರೆ ಸರಿಯಾಗದು. ಏಕೆಂದರೆ ಪ್ರಕೃತಿಯೇ ಅವರ ಕತೆ. ಪ್ರಕೃತಿಯನ್ನು ಕತೆಯಾಗಿಸುವಲ್ಲಿ ಅವರು ತನ್ನ ಸಂಕೀರ್ಣ ಸಾಹಿತ್ಯ ಪ್ರಕಾರಗಳಾದ ವಿಜ್ಞಾನದ ವಿಸ್ಮಯಗಳ ಕುರಿತಾದ ಬರಣಿಗೆಯಲ್ಲಿ ಸಾಮಾನ್ಯವಾಗಿ ಕಾಣುವ ನೇರ ನಿರೂಪಣೆಯನ್ನು ಬಿಟ್ಟು ಕಲೆಗೆ ಸಹಜವಾದ ಕಾಡುಹಾದಿಯನ್ನು ವಸ್ತುಶಃ ಹಿಡಿಯುತ್ತಾರೆ. ಇತರರ ಕೈಯಲ್ಲಿ ಕಾಲ್ಪನಿಕ ಪ್ರವಾಸ ಕಥನವಾಗಬಲ್ಲ ವಸ್ತುವಿನ ಹಂದರವನ್ನು ತೇಜಸ್ವಿ ಯಶಸ್ವಿಯಾಗಿ ಕತೆ–ಕಾದಂಬರಿಯಾಗಿ ಹೇಳಬಲ್ಲರು ಎಂಬುವುದನ್ನು ಅವರ ಕೃತಿಗಳು ಸಾಬೀತು ಮಾಡಿವೆ.

ಆಧುನಿಕ ಕನ್ನಡ ಸಾಹಿತ್ಯದ ನವ್ಯಕಾಲದ ಕಥೆಗಾರರಾಗಿ ಅನಂತಮೂರ್ತಿ ಹೇಗೆ ಮುಖ್ಯರೋ ಹಾಗೆಯೇ ತೇಜಸ್ವಿ ಕಾದಂಬರಿಕಾರರಾಗಿ ಅಷ್ಟೇ ಮುಖ್ಯರು. ನವ್ಯ ಮಾರ್ಗದ ಮುಖೇನ ಸಾಮಾಜಿಕ ಅಂತಸ್ಸತ್ವಗಳನ್ನು ಒಳಗೊಂಡ ವಸ್ತುವನ್ನೇ ತೇಜಸ್ವಿ

ಆರಿಸಿಕೊಂಡು ಓದುಗನ ಜೊತೆಯಲ್ಲೇ ಸಾಗುತ್ತ ಕಾದಂಬರಿಯುದ್ದಕ್ಕೂ ಹಲವು ಹತ್ತು ಸಮಸ್ಯೆಗಳತ್ತ ಬೆಳಕು ಬೀರುತ್ತ ಸಮೃದ್ಧ ಅನುಭವವೊಂದನ್ನು ನೀಡುತ್ತ ಓದುಗನನ್ನು ಬೆರಗು-ಶೋಧನೆಗಳ ಮೂಲಕ ಭಾವ-ವಿಚಾರ ಪರವಶರಾಗುವಂತೆ ಮಾಡುವುದು ತೇಜಸ್ವಿಯವರ ಕಾದಂಬರಿಗಳನ್ನು ನೋಡಿದಾಗ ತಿಳಿಯುತ್ತದೆ.

ತಮ್ಮ ಕಥನಗಳಲ್ಲಿ ಮಾಡುವ ಭಾಷಾಬಳಕೆಯ ಮೂಲಕ ಕನ್ನಡ ಭಾಷೆಗೆ ವಿಶಿಷ್ಟ ಅಭಿವ್ಯಕ್ತಿ ಶಕ್ತಿ ಕೊಟ್ಟವರಲ್ಲಿ ತೇಜಸ್ವಿ ಅವರು ಒಬ್ಬರಾಗಿದ್ದಾರೆ. ವಿಜ್ಞಾನದ ಚರ್ಚೆಯನ್ನು ಕನ್ನಡ ಕಥನದಲ್ಲಿ ಅಳವಡಿಸಿದ ಅವರ ಕಥನ ಪ್ರಯೋಗವು ಕನ್ನಡಕ್ಕೆ ಕೊಟ್ಟ ಶಕ್ತಿಯ ಸ್ವರೂಪ ಎಂತಹುದು ಎಂಬುವುದನ್ನು ತಿಳಿಯಬಹುದು. ತೇಜಸ್ವಿಯು ಕಟ್ಟಿಕೊಡುವ ಕಥನಕ್ರಮವು ಕನ್ನಡ ಸಾಹಿತ್ಯಕ್ಕೆ ದೊಡ್ಡ ಶಕ್ತಿಯನ್ನು ಸೇರ್ಪಡೆ ಮಾಡಿದೆ." "ನಾನು ಏನನ್ನು ಬರೆದರೂ ಅದಕ್ಕೆ ಸಾಹಿತ್ಯ ಪರಿವೇಷ, ಕಥೆ- ಕಾದಂಬರಿಗಳ ಛಾಯೆ ಇರುತ್ತದೆ. ಸಾಹಿತಿ ತನ್ನ ಅನುಭವ ಹೇಳಲು ತತ್ವಶಾಸ್ತ್ರ ಪುರಾಣ ಮನಶಾಸ್ತ್ರ ಉಪಯೋಗಿಸುವಂತೆ,ಈ ಕಥೆಗಳಲ್ಲಿ ಕೀಟಶಾಸ್ತ್ರ, ಪಕ್ಷಿಶಾಸ್ತ್ರ, ಪ್ರಾಣಿಶಾಸ್ತ್ರ ಮುಂತಾದುವುಗಳ ಉಪಯೋಗ ಆಗಿದೆಯಷ್ಟೆ. ಸ್ವಾನುಭವದ ಎಲ್ಲೆಯನ್ನು ಮೀರದೆ ನಿರೂಪಿಸಿರುವ ಇವನ್ನು ಕಥೆಗಳೆಂದೇ ಪರಿಗಣಿಸಬಹುದು ಅಥವಾ ಇವನ್ನು ಏನೆಂದು ಪರಿಗಣಿಸುವ ಅಗತ್ಯವಾದರೂ ಏನು? ಎಂದು ಅವರು ಹೇಳುವುದುಂಟು".

ತೇಜಸ್ವಿ ಬರಹದ ಮೊದಲ ಘಟ್ಟದಲ್ಲಿ ಸಾಮಾಜಿಕ ಬದುಕಿನಿಂದ ಅನುಭವ ಲೋಕ ಸೃಷ್ಟಿಯಾಗುತ್ತಿತ್ತು. ಎರಡನೆಯ ಘಟ್ಟದಲ್ಲಿ ಇಲ್ಲಿಂದ ಅನುಭವದ ಒಳಹರಿವು ಕಡಿಮೆಯಾದ ಕಾರಣ ಕಾಡುಮೇಡು ಹಾಗೂ ವಿಜ್ಞಾನದ ಓದಿನಿಂದ ಅದು ಬರತೊಡಗಿತು. ಬರಹಕ್ಕೆ ಬೇಕಾದ ಅನುಭವ ಹಾಗೂ ತಿಳಿವಿನ ಕೊರತೆ ತುಂಬಿಕೊಳ್ಳಲು ಹೊಸ ಉಪಾಯವನ್ನು ತೇಜಸ್ವಿಯು ಕಥನದ ಉದ್ದಕ್ಕೂ ಎಚ್ಚರಿಕೆಯಿಂದ ಕಂಡುಕೊಳ್ಳುತ್ತಲೇ ಬಂದರು. ಈ ಹೊಸ ಅನುಭವ ಹಾಗೂ ತಿಳಿವಿನ ಹರಿವು ಅವರ ಕಥನಕ್ಕೆ ಹೊಸ ದೃಷ್ಟಿಕೋನಗಳನ್ನು ಪಡೆದುಕೊಳ್ಳಲು ಕಾರಣವಾಯಿತು.

ಪರಿಸರದ ಅವರ ತಿಳುವಳಿಕೆ ಹಾಗೂ ವೈಜ್ಞಾನಿಕವಾಗಿ ಅವರು ಪ್ರಕೃತಿಯನ್ನು ಅರ್ಥ ಮಾಡಿಕೊಳ್ಳುವ ಪ್ರಯತ್ನ ಅವರ ಕೃತಿಗಳಲ್ಲಿ ಹಾಸು ಹೊಕ್ಕಾಗಿದೆ. ತೇಜಸ್ವಿಯವರ ಕಾದಂಬರಿಗಳ ತಾತ್ವಿಕ ದರ್ಶನ ಅವರು ಪಡೆದ ವೈಜ್ಞಾನಿಕ ಮಾಹಿತಿಗಳಿಂದ ಪ್ರೇರೇಪಿತವಾಗಿದೆ. ವಿಜ್ಞಾನದ ವಿವರಗಳನ್ನು ತಮ್ಮ ಅನುಭವದಲ್ಲಿ ಕಲಾನುಭವವಾಗಿ ಪರಿವರ್ತಿಸುವಲ್ಲಿ ತೇಜಸ್ವಿಯವರ ಕೌಶಲ ಹಾಗೂ ಜೀವನ ದರ್ಶನ ಎರಡೂ ಸೇರಿಕೊಂಡಿದೆ.

ತೇಜಸ್ವಿಯವರು ತಮ್ಮ ಸಾಹಿತ್ಯ ಕೃತಿಗಳಲ್ಲಿ ವಿಜ್ಞಾನದ ಬಳಕೆಯಿಂದ ಒಂದು ಅವ್ಯಕ್ತದ ಹುಡುಕಾಟದಲ್ಲಿ ತೊಡಗುತ್ತಾರೆ. ವಿಜ್ಞಾನದ ಅನೇಕ ಮಾಹಿತಿಗಳು ಅವರಿಗೆ ವ್ಯಕ್ತದ ವಿವರಗಳನ್ನು ಗ್ರಹಿಸಲು ಸಹಕಾರಿ. ವ್ಯಕ್ತ ವಿವರಗಳು ಅವರ ಕೃತಿಗಳಲ್ಲಿ ವಿಜ್ಞಾನದ ವಿವರಗಳಿಂದ ಪ್ರಾರಂಭಿಸಿ ನಿಧಾನಕ್ಕೆ ವಿಸ್ತರಿಸುತ್ತಾ ಪ್ರಾಣಿ, ಪರಿಸರಗಳನ್ನು

ಒಳಗೊಳ್ಳುತ್ತದೆ. ಅದರ ನಡುವೆ ಬದುಕುವ ಮನುಷ್ಯ ಪ್ರಪಂಚವನ್ನು ಒಳಗೊಳ್ಳುತ್ತದೆ. ಮನುಷ್ಯ ಕಣ್ಣಿಗೆ ಕಾಣುವ ಪ್ರಕೃತಿಯ ಪರಿಸರದಲ್ಲಿ ಇತರ ಜೀವಿಗಳಿಗಿಂತ ಶ್ರೇಷ್ಠವಾದ ಜೀವಿ ಎಂಬ ಕಲ್ಪನೆಯಲ್ಲಿ ತೇಜಸ್ವಿ ಅವ್ಯಕ್ತ ಹುಡುಕಾಟದಲ್ಲಿ ತೊಡಗುವುದಿಲ್ಲ. ಈ ನಿಲುವು ತೇಜಸ್ವಿಯವರನ್ನು ಅವರ ಸಮಕಾಲೀನ ಬರಹಗಾರರಿಂದ ಬೇರೆ ಮಾಡುತ್ತದೆ.

ಹೀಗೆ ಕನ್ನಡದ ಉತ್ತಮ ಬರಹಗಾರ ಮತ್ತು ಚಿಂತಕರಾಗಿದ್ದ ಕೆ.ಪಿ. ಪೂರ್ಣಚಂದ್ರ ತೇಜಸ್ವಿಯವರು ೨೦೦೮ ರ ಎಪ್ರಿಲ್ ೫ ರ ಮಧ್ಯಾಹ್ನ ಮೂಡಿಗೆರೆ ಸಮೀಪದ ಹಳೆ ಮೂಡಿಗೆರೆ ನಿಂಬೆ ಮೂಲೆಯಲ್ಲಿನ ಸ್ವಗೃಹದಲ್ಲಿ ಅಸ್ತಂಗತರಾದರು.

# ೨.೧. ತೇಜಸ್ವಿ – ಕೃತಿವಿವರ ಮತ್ತು ಪ್ರಶಸ್ತಿಗಳು

## ೧. ಚಿದಂಬರ ರಹಸ್ಯ

ಚಿದಂಬರ ರಹಸ್ಯ ಕಾದಂಬರಿಯು ೧೯೮೫ ರಲ್ಲಿ ಪ್ರಕಟಗೊಂಡಿದೆ. ತೇಜಸ್ವಿಯವರಿಗೆ ರಾಜ್ಯ ಮತ್ತು ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿಗಳನ್ನು (೧೯೮೬, ೧೯೮೮) ತಂದು ಕೊಟ್ಟ ಕಾದಂಬರಿಯಾಗಿದೆ. ಇದು ೧೯೮೯ ರ ಭಾರತೀಯ ಭಾಷಾ ಪ್ರಾದೇಶಿಕ ಪ್ರಶಸ್ತಿಯನ್ನು ಪಡೆದಿದೆ. ಮರಾಠಿ ಭಾಷೆಗೆ ಅನುವಾದಗೊಂಡ ಕಾದಂಬರಿಯು ೧೯೮೫, ೧೯೮೮, ೧೯೯೧, ೧೯೯೫ರಲ್ಲಿ ಒಟ್ಟು ನಾಲ್ಕು ಮುದ್ರಣಗಳನ್ನು ಕಂಡಿದೆ. ಸಮೃದ್ಧ ಅನುಭವದೊಂದಿಗೆ ಚಿಂತನ ಪರ ಕಾದಂಬರಿ ಕೂಡ ಆಗಿದೆ. ಕೋಮು ಗಲಭೆಗಳಿಂದ ಇಡೀ ಕೆಸರೂರು ಬೆಂಕಿಗೆ ಆಹುತಿ ಆಗಿದೆ. ಜಾತ್ಯಾತೀತ ರಫಿ– ಜಯಂತಿ ಮಾತ್ರ ಉಳಿದುಕೊಳ್ಳುವುದರೊಂದಿಗೆ, ಅಧೋಗತಿಗೆ ಇಳಿದ ಸಮಾಜಕ್ಕೆ ಪರಿಹಾರವೊಂದನ್ನು ಸೂಚಿಸುತ್ತದೆ.

## ೨) ಕರ್ವಾಲೋ

ಕರ್ವಾಲೋ ಕಾದಂಬರಿಯು ೧೯೮೦ ರಲ್ಲಿ ಪ್ರಕಟವಾಗಿದೆ. ಇಂಗ್ಲೀಷ್, ಜಪಾನಿ, ಮಲೆಯಾಳಂ ಭಾಷೆಗಳಿಗೆ ಅನುವಾದಗೊಂಡ ಕಾದಂಬರಿ ಹೆಚ್ಚು ಜನಪ್ರಿಯತೆಯನ್ನು ತಂದು ಕೊಟ್ಟಿದೆ. ೧೯೮೦ ರ ಅತ್ಯುತ್ತಮ ಸೃಜನಶೀಲ ಕೃತಿ ಎಂದು ಕರ್ನಾಟಕ ಸಾಹಿತ್ಯ ಅಕಾಡೆಮಿಯ ವಿಶೇಷ ಬಹುಮಾನವನ್ನು ತಂದುಕೊಟ್ಟಿದೆ. ೧೯೮೦, ೧೯೮೨, ೧೯೮೩, ೧೯೮೪,೧೯೮೫, ೧೯೮೭, ೧೯೮೮, ೧೯೮೯, ೧೯೯೧, ೧೯೯೨ ರಲ್ಲಿ ಹತ್ತು ಮುದ್ರಣಗಳನ್ನು ಕಂಡಿದೆ. ಕನ್ನಡದ ಎಲ್ಲ ಕಾದಂಬರಿಗಳಿಗಿಂತ ಕರ್ವಾಲೋ ಕಾದಂಬರಿ ಭಿನ್ನವಾಗಿದೆ. ಇಲ್ಲಿಯ ತಂತ್ರವೇ ಒಂದು ಹೊಸ ಬಗೆಯದಾಗಿದೆ. ಜೀವ ವಿಕಾಸದ ಅವಸ್ಥಾಂತರಗಳನ್ನು ಶೋಧಿಸುತ್ತ, ವಿವಿಧ ಜೀವ ಸಂಕುಲಗಳ ವಿನಾಶ ಮತ್ತು ಅವುಗಳನ್ನು ಹಿಡಿಯಲೆತ್ನಿಸುವ ಮನುಷ್ಯನ ವಿಫಲತೆಯನ್ನು ಇದು ಹೇಳುತ್ತದೆ.

## ೨. ಜುಗಾರಿ ಕ್ರಾಸ್

ಇನ್ನೂರೈವತ್ತು ಪುಟಗಳಿದ್ದರೂ ಇಲ್ಲಿಯ ಕಥಾನಕ ಕೇವಲ ೨೪ ಗಂಟೆಗಳಲ್ಲಿ ನಡೆಯುವ ಹಂದರದ್ದಾಗಿದೆ. ಈ ಕಾದಂಬರಿಯು ೧೯೯೪ ರಲ್ಲಿ ಪ್ರಕಟವಾದ ಕಾದಂಬರಿಯಾಗಿದೆ. ಆಧುನಿಕ ಪ್ರಭಾವಕ್ಕೆ ಸಿಕ್ಕಿ ನಾನಾ ಕಾರಣಗಳಿಂದಾಗಿ ಈ ಊರುಗಳ ಸ್ಥಿತಿಯೇ ಬದಲಾಗಿ ಬಿಡುತ್ತದೆ. ಹಣದ ಆಗರವಾದ ಕಾಡು ಇಂದಿನ ಸಾಮಾಜಿಕ ಸಂದರ್ಭದಲ್ಲಿ ಹೇಗೆ ಕಾಳದಂಧೆಯ ಕೇಂದ್ರವಾಗಿದೆ ಮತ್ತು ಇದು ದೇಶದ ಅತ್ಯುನ್ನತ ರಾಜಕೀಯವನ್ನು ಸಹ ಹೇಗೆ ನಿಯಂತ್ರಿಸುತ್ತದೆ ಎಂಬ ವಿಚಾರವನ್ನು ವ್ಯಕ್ತಪಡಿಸುತ್ತದೆ.

## ಕಿರು ಕಾದಂಬರಿಗಳು

### ೧) ಸ್ವರೂಪ

'ಸ್ವರೂಪ' ಕಾದಂಬರಿಯು ೧೯೬೬ರಲ್ಲಿ ಪ್ರಕಟವಾದ ಕಾದಂಬರಿ ಆಗಿದೆ. ಈ ಕಾದಂಬರಿಯಲ್ಲಿ ನವ್ಯ ಸಾಹಿತ್ಯದ ಬೌದ್ಧಿಕತೆಯ ದಟ್ಟ ಪ್ರಭಾವ ಇದೆ. ಪ್ರೇಮ ಮತ್ತು ಸಾವು ಕೃತಿಯ ಕೇಂದ್ರ ವಸ್ತು. ಜೀವನದ ಮೌಲ್ಯಗಳು, ತತ್ವಗಳು ಕುರಿತ ವಿಚಾರಧಾರೆ ಮುಖ್ಯವಾಗುತ್ತದೆ. ಬಾಳಿನಲ್ಲಿ ಎಷ್ಟೇ ಕ್ರೌರ್ಯ, ಹಿಂಸೆ ಕಂಡರೂ ಯಾವುದೋ ಒಂದು ಶಕ್ತಿ ವ್ಯಕ್ತಿಗೆ ಚಲನಾತ್ಮಕತೆಯನ್ನು ಕೊಡುತ್ತದೆ. ಇದೇ 'ಸ್ವರೂಪ'ದ ತಿರುಳು ಕೂಡ ಆಗಿದೆ.

### ೨. ನಿಗೂಢ ಮನುಷ್ಯರು

'ನಿಗೂಢ ಮನುಷ್ಯರು' ಕಾದಂಬರಿಯು ೧೯೭೬ ರಲ್ಲಿ ಪ್ರಕಟವಾಗಿದೆ. ಕಿರು ಕಾದಂಬರಿಯಾದ ಇದು ಒಂದು ಬಗೆಯ ಅವಾಸ್ತವ ಸಂಗತಿಗಳನ್ನು ಅಥವಾ ವಸ್ತುಗಳನ್ನು ಒಂದುಗೂಡಿಸುವ ವಾತಾವರಣವನ್ನು ಸೃಷ್ಟಿಸುತ್ತದೆ. ನಾಗರಿಕ ಸಮಾಜ ಮತ್ತು ಕಿರಾತ ಪ್ರಪಂಚಗಳ ಹಿನ್ನೆಲೆಯಲ್ಲಿ ನಿಸರ್ಗವೂ ಕೂಡಿಕೊಂಡು ಇಲ್ಲಿ ಸಾವು ಬದುಕುಗಳ ವಿಚಿತ್ರ ವ್ಯಾಪಾರದ ಚಿತ್ರವು, ಕನಸಿನ ಭ್ರಾಮಕ ಅಥವಾ ನಿಗೂಢ ವಾತಾವರಣವನ್ನು ಸೃಷ್ಟಿಸಿದೆ.

### ಮಾಯಾಲೋಕ

'ಮಾಯಾಲೋಕ' ಕೃತಿಯು ತೇಜಸ್ವಿಯವರ ಕೊನೆಯ ಕೃತಿ ಆಗಿದೆ. ಇದು ಗ್ರಾಮೀಣ ಬದುಕಿನ ಜನಸಾಮಾನ್ಯರ ಸಂಕೀರ್ಣ ಜೀವನದ ಕಥೆಯನ್ನು ಒಳಗೊಂಡಿದೆ. ನಮ್ಮ ಸಾಮಾಜಿಕ ಬದುಕಿನಲ್ಲಿ ಅಂತರ್ಗತವಾಗಿರುವ ಜಾತಿ-ಪ್ರಜ್ಞೆಯನ್ನು ಮೀರಿ ಸೆಕ್ಯುಲರ್ ಪರಿಸರದಲ್ಲಿ ಬದುಕುತ್ತಿರುವ ಜನರ ನಡುವಿನ ಆಗುಹೋಗುಗಳ ಘರ್ಷಣೆ, ತಲ್ಲಣಗಳ ಚಿತ್ರಣ ಈ ಕೃತಿಯಲ್ಲಿ ( ಕಾದಂಬರಿ) ರೂಪುಗೊಂಡಿದೆ.

## ಜೀವನ ಚರಿತ್ರೆ ಹಾಗೂ ಆತ್ಮ ಚರಿತ್ರೆ

### ಅಣ್ಣನ ನೆನಪು:

೧೯೯೬ ರಲ್ಲಿ ಪ್ರಕಟದ ಕೃತಿ ಆಗಿದೆ. ಇದು ಏಕಕಾಲಕ್ಕೆ ಕುವೆಂಪು ಅವರ ಜೀವನ ಚರಿತ್ರೆಯೂ ತೇಜಸ್ವಿಯವರ ಆತ್ಮ ಚರಿತ್ರೆಯೂ ಆಗಿದೆ. ತೇಜಸ್ವಿಯು ಕುವೆಂಪು ಅವರನ್ನು ಕೇಂದ್ರವಾಗಿಟ್ಟುಕೊಂಡು ಬರೆದಿರುವ ನೆನಪುಗಳ ಸಂಗ್ರಹವಾಗಿದೆ. ಹಾಗೆಯೇ ಎಲಿಯಟ್, ನೆಹರೂ, ಲೋಹಿಯಾ, ಕನ್ನಡ ಚಳವಳಿಗಳು, ಕರ್ನಾಟಕ ಏಕೀಕರಣ, ಎಪ್ಪತ್ತರ ದಶಕದ ಬರಹಗಾರರ ಒಕ್ಕೂಟ, ಬೂಸಾ ಪ್ರಕರಣ ಮುಂತಾದ ವ್ಯಕ್ತಿ-ವಿಷಯ ಗಂಭೀರ ವಿಚಾರಗಳನ್ನು ಚರ್ಚಿಸುತ್ತದೆ. ಇದು ಕರ್ನಾಟಕ ಸಾಂಸ್ಕೃತಿಕ

ಚರಿತ್ರೆಯನ್ನು ಅಧ್ಯಯನ ಮಾಡುವವರಿಗೆ ಉಪಯುಕ್ತ ಕೃತಿ ಆಗಿದೆ.

## ಕಥಾ ಸಂಕಲನಗಳು

### ೧. ಹುಲಿಯೂರಿನ ಸರಹದ್ದು

ಈ ಕಥಾ ಸಂಕಲನವು ೧೯೬೨ರಲ್ಲಿ ಪ್ರಕಟಗೊಂಡ ಮೊದಲ ಕಥಾ ಸಂಕಲನವಾಗಿದೆ. ' ಲಿಂಗಬಂದ', ' ಪಂಚ್ರೊಳ್ಳಿ ಪಿಶಾಚಿಯ ಸವಾಲು', ಗುಡುಗು ಹೇಳಿದ್ದೇನು',? 'ಊರ್ವಶಿ', ' ಹುಲಿಯೂರಿನ ಸರಹದ್ದು', ' ಗಾಂಧೀಜಿ ದೆಸೆಯಿಂದ' ಎಂಬ ೬ ಕಥೆಗಳನ್ನು ಒಳಗೊಂಡಿದೆ.

### ೨ ' ಅಬಚೂರಿನ ಪೋಸ್ಟಾಫೀಸು'

' ಅಬಚೂರಿನ ಪೋಸ್ಟಾಫೀಸು' ಕಥಾ ಸಂಕಲನವು ೧೯೭೩ರಲ್ಲಿ ಪ್ರಕಟಗೊಂಡಿದೆ. ಇಲ್ಲಿಯ ಬರವಣಿಗೆ ಸಮಾಜಮುಖಿಯಾಗಿದೆ. ಸಂಸ್ಕೃತಿಮುಖಿ ಆಗಿದೆ. ಈ ಕಥಾಸಂಕಲನದಲ್ಲಿರುವ ಕತೆಯು ಚಲನಚಿತ್ರವಾಗಿ 'ರಾಷ್ಟ್ರೀಯ ಚಲನಚಿತ್ರ ಪ್ರಶಸ್ತಿ'ಯನ್ನು ೧೯೭೩ರಲ್ಲಿ ಪಡೆದುಕೊಂಡಿದೆ. 'ತಬರನ ಕತೆ ' ಆರ್.ನಾಗೇಶ್ ನಿರ್ದೇಶನದಲ್ಲಿ ನಾಟಕವಾಗಿ ಅನೇಕ ಪ್ರಯೋಗಗಳನ್ನು ಕಂಡಿವೆ.

### ೩). ಕಿರಗೂರಿನ ಗಯ್ಯಾಳಿಗಳು:

'ಕಿರಗೂರಿನ ಗಯ್ಯಾಳಿಗಳು' ಈ ಕಥಾ ಸಂಕಲನವು ೧೯೯೧ರಲ್ಲಿ ಪ್ರಕಟಗೊಂಡಿದೆ. ಇದು ' ಕಿರಗೂರಿನ ಗಯ್ಯಾಳಿಗಳು', 'ಕೃಷ್ಣೇಗೌಡನ ಆನೆ', 'ಮಾಯಾಮೃಗ', 'ರಹಸ್ಯವಿಶ್ವ', ಎಂಬ ನಾಲ್ಕು ಕತೆಗಳ ಸಂಗ್ರಹವಾಗಿದೆ. ಕರ್ನಾಟಕ ಸಾಹಿತ್ಯ ಅಕಾಡೆಮಿಯ ಶ್ರೇಷ್ಠ ಸೃಜನಶೀಲ ಕೃತಿ ಪ್ರಶಸ್ತಿಯನ್ನು ೧೯೯೨ ರಲ್ಲಿ ಪಡೆದಿದೆ. ಮೊದಲ ಕತೆಯಾದ ' ಕಿರಗೂರಿನ ಗಯ್ಯಾಳಿಗಳು' ಸ್ತ್ರೀವಾದಿಗಳಿಂದ ಪ್ರಶಂಸೆ ಪಡೆದಿದ್ದು, ಇದು ಹಿಂದಿ, ಇಂಗ್ಲೀಷ್, ಮಲೆಯಾಳಂ ಭಾಷೆಗಳಿಗೆ ಅನುವಾದಗೊಂಡಿದೆ. ಎ.ಎನ್.ರಾವ್ ಜಾಧವ್‌ರಿಂದ ನಾಟಕವಾಗಿ ಅನೇಕ ಪ್ರದರ್ಶನ ಕಂಡಿದೆ. 'ಮಾಯಾಮೃಗ' ಆ ಅವಧಿಯಲ್ಲಿ ಪ್ರಕಟವಾದ ರಾಷ್ಟ್ರದ ಅತ್ಯುತ್ತಮ ಹದಿಮೂರು ಕತೆಗಳಲ್ಲಿ ಒಂದೆಂದು ದೆಹಲಿಯ ಕಥಾ ಪ್ರಶಸ್ತಿ ಪಡೆದಿದೆ. ' ಕೃಷ್ಣೇಗೌಡನ ಆನೆ' ಈ ಕಥೆಯು ಇಂಗ್ಲೀಷ್, ಹಿಂದಿ ಭಾಷೆಗಳಿಗೆ ಅನುವಾದಿಸಲ್ಪಟ್ಟಿದೆ.

## ಪರಿಸರ ಮತ್ತು ವೈಜ್ಞಾನಿಕ ಕಥಾಸಂಕಲನಗಳು:-

### ೧) ಪರಿಸರದ ಕಥೆ:

ಪರಿಸರದ ಕಥೆ ೧೯೯೧ ರಲ್ಲಿ ಪ್ರಕಟವಾಗಿದೆ. ಮಾನೀಟರ್, ಕಿವಿಯೊಡನೆ ಒಂದು ದಿನ, ಮಾಸ್ತಿ ಮತ್ತು ಬೈರ, ಸುಸ್ಮಿತ ಮತ್ತು ಹಕ್ಕಿಮರಿ, ಎಗ್ಗಂನ ಪುಂಗಿ,

ಕುಕ್ಕುಟ ಪಿಶಾಚ, ಮೂಲಿಕೆ ಬಳ್ಳಿಯ ಸುತ್ತ- ಮುಂತಾದ ಪರಿಸರವನ್ನು ಕುರಿತು ಹದಿನಾಲ್ಕು ಬರಹಗಳಿವೆ. ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಲಭಿಸಿದೆ.

## ೨) ಏರೋಪ್ಲೇನ್‌ಚಿಟ್ಟೆ ಮತ್ತು ಇತರೆ ಕಥೆಗಳು

ಈ ಕಥಾ ಸಂಕಲನವು ೧೯೯೩ ರಲ್ಲಿ ಪ್ರಕಟವಾಗಿದೆ. ಇದು ಹದಿನೇಳು ಕಥೆಗಳ ಸಂಗ್ರಹವಾಗಿದೆ. ಒಂಟೆಹುಳು, ಏರೋಪ್ಲೇನ್ ಚಿಟ್ಟೆ, ಬಾವಲಿಗಳ ಅತೀಂದ್ರಿಯ ವಿಸ್ಮಯ, ಸರ್ಪದೃಷ್ಟಿ, ಚೇಂಕ್ರಮೇಸ್ತ್ರಿ ಮತ್ತು ಅರಿಸ್ಟಾಟಲ್, ಹಾವುಮೀನಿನಪ್ರಚಂಡಯಾನ, ಅಕ್ಕಮ್ಮಹೇಳಿದಕಥೆ, ಹಲ್ಲಿಯಪ್ರಾಣಬಾಲದಲ್ಲಿ, ನಾವುಕೊಂದಹಕ್ಕಿ ಈ ಮುಂತಾದ ಕತೆಗಳು ವೈಜ್ಞಾನಿಕ ಹಿನ್ನೆಲೆಯಲ್ಲಿ ಬರೆಯಲಾಗಿದೆ.

## ಕಾಡಿನ ಕಥೆಗಳು ಭಾಗ-೧

ಕಾಡಿನ ಕಥೆಗಳು ಭಾಗ-೧. ಇದು ೧೯೯೪ ರಲ್ಲಿ ರಚನೆಗೊಂಡಿದೆ. ಇದು ಕೆನೆತ್‌ಆ್ಯಂಡರ್‌ಸನ್ ಅನುಭವಗಳ ಸಂಗ್ರಹ ರೂಪಾಂತರದ ಮೊದಲನೆ ಭಾಗ. ಬೆಳ್ಳಂದೂರಿನನರಭಕ್ಷಕ, ಫೇರ್‌ಖಾನ್, ವೈನಾಡಿನನರಭಕ್ಷಕ ಎಂಬಂತೆ ಒಟ್ಟು ಹತ್ತು ಕಥೆಗಳಿವೆ. ಮೂಲ ಲೇಖಕ ಆ್ಯಂಡರ್‌ಸನ್ ಮತ್ತು ಅನುವಾದಕ ತೇಜಸ್ವಿಯವರ ಅನುಭವಗಳು ಸಂಧಿಸಿದ ಸ್ಥಿತಿಯಲ್ಲಿ ಈ ಕತೆಗಳು ಮೈತಾಳಿವೆ. ಕೆನೆತ್ ಆ್ಯಂಡರ್‌ಸನ್ ಒಬ್ಬ ಸಾಹಸಿ. ಹುಟ್ಟಿದ್ದು ಹೈದರಾಬಾದ್ ಸ್ಕಾಟ್ಲೆಂಡ್ ಕುಟುಂಬ ಒಂದರಲ್ಲಿ. ಇವರು ತಮ್ಮ ಜೀವನದ ಬಹುಪಾಲು ಕಾಲವನ್ನು ಕಾಡಿನಲ್ಲಿ ಕಳೆದರು. ಇವರ ಅನುಭವಗಳನ್ನು ದಿ ಬ್ಲ್ಯಾಕ್ ಪ್ಯಾಂಥರ್ಸ್ ಆಫ್ ಶಿವನಿಪಳ್ಳಿ, ಮ್ಯಾನ್‌ಈಟರ್ಸ್ ಆ್ಯಂಡ್ ಜಂಗಲ್‌ಕಿಲರ್ಸ್ ಮೊದಲಾದ ಕೃತಿಗಳಲ್ಲಿ ಚಿತ್ರಿಸಿದ್ದಾರೆ.

## ಕಾಡಿನ ಕಥೆಗಳು ಭಾಗ -೨

ಕಾಡಿನ ಕಥೆಗಳು ಭಾಗ-೨ ಈ ಕೃತಿಯು ೧೯೯೩ ರಲ್ಲಿ ಪ್ರಕಟಗೊಂಡಿದೆ. ಕೆನೆತ್ ಆ್ಯಂಡರ್‌ಸನ್ ರ ಅನುಭವಗಳ ಸಂಗ್ರಹ ರೂಪಾಂತರದ ಎರಡನೇ ಭಾಗವಾಗಿದೆ. ಪೆದ್ದಚೆರುವಿನ ರಾಕ್ಷಸ, ತಾಳವಾಡಿಯ ಮೂಕರಾಕ್ಷಸ, ಲಕ್ಕವಳ್ಳಿಯ ಹೆಬ್ಬುಲಿ ಎಂಬ ಮೂರು ಶೀರ್ಷಿಕೆಗಳ ಅಡಿಯಲ್ಲಿ ಒಟ್ಟು ಒಂಬತ್ತು ಕಥೆಗಳು ರಚನೆಗೊಡಿದೆ. ಈ ಕೃತಿಗೆ ೧೯೯೪ ರಲ್ಲಿ ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಲಭಿಸಿದೆ.

## ಕಾಡಿನ ಕಥೆಗಳು ಭಾಗ-೩

ಈ ಕೃತಿಯು ೧೯೯೪ ರಲ್ಲಿ ಪ್ರಕಟಗೊಂಡಿದೆ. ಇದು ಕೆನೆತ್ ಆ್ಯಂಡರ್‌ಸನ್ ಅನುಭವಗಳ ಸಂಗ್ರಹ ರೂಪಾಂತರದ ಮೂರನೆ ಭಾಗ. ದಿಗುವ ಮೆಟ್ಟದ ಕೊಲೆಗಡಕ, ಮಂಚಿಹಳ್ಳಿಯಮುಗ್ಧರು, ಭಯಾನಕಮಮ್ಮಟಿವಾಯನ್, ಜಾಲಹಳ್ಳಿಯಕುರ್ಕ ಎಂಬ ಶೀರ್ಷಿಕೆಗಳ ಅಡಿಯಲ್ಲಿ ಒಟ್ಟು ಒಂಬತ್ತು ಕಥೆಗಳಿವೆ.

## ಕಾಡಿನ ಕಥೆಗಳು ಭಾಗ–೪

### ರುದ್ರ ಪ್ರಯಾಗದ ಭಯಾನಕ ನರಭಕ್ಷಕ

ಈ ಕೃತಿಯು ೧೯೯೫ ರಲ್ಲಿ ಪ್ರಕಟಗೊಂಡಿದೆ. ಇದು ಖ್ಯಾತ ಇಂಗ್ಲೀಷ್ ಬೇಟೆಗಾರ ಜಿಮ್ ಕಾರ್ಬೆಟ್‌ನ ' ಮ್ಯಾನ್ ಈಟಿಂಗ್ ಲೆಪರ್ಡ್ ಆಫ್ ರುದ್ರಪ್ರಯಾಗ್' ಪುಸ್ತಕದ ರೂಪಾಂತರ. ಈತನು ೧೮೭೫–೧೯೫೫ರಲ್ಲಿ ಜೀವಿಸಿದ್ದನು. ತಾನು ಪ್ರಯಾಗದಲ್ಲಿ ನಡೆಸಿದ ಸಾಹಸ, ಘರ್ನಾಲ್ ರೈತರೊಂದಿಗಿನ ತನ್ನ ಬೇಟೆಯ ಅನುಭವಗಳನ್ನು ವಿವರಿಸಿದ್ದಾನೆ. ಇದನ್ನು ತೇಜಸ್ವಿ ಕನ್ನಡಕ್ಕೆ ರೂಪಾಂತರಿಸಿದ್ದಾರೆ.

### ಕಿರಿಯರಿಗಾಗಿ ಪರಿಸರ

' ಕಿರಿಯರಿಗಾಗಿ ಪರಿಸರ' ಎಂಬ ಈ ಕೃತಿಯನ್ನು ತೇಜಸ್ವಿ, ನಾಗೇಶ ಹೆಗಡೆ ಮತ್ತು ಪಿ.ಎಸ್. ವಿವೇಕಾನಂದ್ ಈ ಮೂರು ಜನ ಸೇರಿ ಮಕ್ಕಳಿಗಾಗಿ ರಚಿಸಿರುವ ಪುಸ್ತಕವಾಗಿದೆ. ಪರಿಸರದ ಬಗೆಗಿನ ವಿವರವನ್ನು ಒಳಗೊಂಡಿದೆ. ಇಲ್ಲಿಯ ಭಾಷೆಯು ಸರಳ ರೂಪದಾಗಿದೆ. ತೇಜಸ್ವಿಯು ಈ ಕೃತಿಯಲ್ಲಿ ಸೌರಶಕ್ತಿಯ ವಿಶ್ವರೂಪ, ಇಕಾಲಜಿಯ ಸರಪಳಿ, ಪರಿಸರಕ್ಕೆ ತಕ್ಕ ರೂಪ ಬದಲಾವಣೆ, ಮಳೆ ಬರಿಸಲು ಸಾಧ್ಯವೇ, ಆಪರೇಷನ್ ಫ್ಲೆಮಿಂಗೋ, ಸರ್ವನಾಶದಿಂದ ಮೇಲೆದ್ದ ಬಫೆಲೋ ಮುಂತಾದ ಅಂಶಗಳ ಬಗ್ಗೆ ವಿಚಾರ ಮಾಡುತ್ತಾರೆ.

## ಕವನ ಸಂಕಲನ

### ಬೃಹನ್ನಳೆ ಸೋಮುವಿನ ಸ್ವಗತ ಲಹರಿ

೧೯೬೨ರಲ್ಲಿ ಪ್ರಕಟವಾದ ತೇಜಸ್ವಿಯವರ ಏಕೈಕ ಕವನ ಸಂಕಲನವಾಗಿದೆ. ರಾಜಕೀಯ ವಿಡಂಬನೆ, ಅಸಹಾಯಕತೆ, ಸಿಟ್ಟು, ಅಪ್ರಕಟಿತ ಪ್ರೇಮ ಮುಂತಾದುವು ಈ ಸಂಕಲನದ ವಸ್ತುಗಳಾಗಿವೆ. ಇದರಲ್ಲಿ ಒಟ್ಟು ಹದಿನಾಲ್ಕು ಕವಿತೆಗಳಿವೆ.
ಮೊದಲನೆ ಕವಿತೆ ಭೂಮಿಯನ್ನು ನಮಿಸುವ ಕೆಲಸ ಮಾಡುತ್ತಲೇ ನಿಸರ್ಗ ಹಾಗೂ ಪರಿಸರ ಪ್ರೀತಿಯನ್ನು ತೋರುತ್ತದೆ. ಎರಡನೆಯ ಕವಿತೆ ನಮ್ಮ ಕನ್ನಡತನ ಎಷ್ಟು ಹೀನಾಯವಾಗಿದೆ. ಇನ್ನಾದರೂ ಕನ್ನಡಿಗರು ಎಚ್ಚೆತ್ತುಕೊಳ್ಳದಿದ್ದರೆ ಹೇಗೆ? ಎಂದು ಪ್ರಶ್ನಿಸಿದ್ದಾರೆ.

ವಿಶ್ವವನ್ನು ನಾಶ ಮಾಡುವ ಪ್ರಯತ್ನವೇ ' ವಿಶ್ವಮೇಧ' ಎನ್ನುವ ಕವಿ ನಾವು ಕ್ರಿಸ್ತ, ಬಸವ, ಗಾಂಧಿಯವರನ್ನು ಕಳೆದುಕೊಂಡಾಯಿತು. ಇನ್ನು ಈ ವಿಶ್ವ ನೋಡಿಕೊಳ್ಳುವವರು ಯಾರು ಎಂದು ಮನ ಮಿಡಿಯುತ್ತಾರೆ. ಕೆಲವು ಕವಿತೆಗಳು ಆಧ್ಯಾತ್ಮಕ್ಕೆ ಸಂಬಂಧಿಸಿದ ಕವಿತೆಗಳು ಕೂಡ ಇವೆ. ಹಾಗೆಯೇ ' ಪಾಠಶಾಲೆ' ಎಂಬ ಕವನದಲ್ಲಿ ತಮ್ಮ ಬಾಲ್ಯ ಕಾಲದ ಶಾಲಾ ನೆನಪುಗಳನ್ನು ಸ್ನೇಹಿತರನ್ನು ಕುರಿತು ವಿವರಿಸುತ್ತಾರೆ.

‘ಪದದ ಪದವಿ’ ಕವನದಲ್ಲಿ ಮಾತಿನ ಮಹತ್ವ ಮತ್ತು ‘ ಪೋಲೀಸ್ ಮತ್ತು ಪಾನ ನಿರೋಧ’ ಕವಿತೆಯಲ್ಲಿ ಪಾನ ನಿರೋಧ ಕುರಿತ ಕಾನೂನು ಬಗ್ಗೆ ಪ್ರಸ್ತಾಪಿಸಿದ್ದಾರೆ. ‘ಬಚ್ಚಲಜಗತ್ತು’, ‘ ಅನುಮಾತೀರದಲ್ಲಿ’, ಟಾರು ಮಾರ್ಗ ಮತ್ತು ಪ್ರಣಯ’, ‘ಅಂತ್ಯಗಾನ’ ಮುಂತಾದ ಕವನಗಳು ವೈಚಾರಿಕತೆಯಿಂದ ಕೂಡಿದೆ.

## ನಾಟಕ

### ಯಮಳ ಪ್ರಶ್ನೆ

ನವ್ಯ ಮಾರ್ಗದ ಕಾಲಘಟ್ಟದಲ್ಲಿ ರಚಿತಗೊಂಡ ಅಸಂಗತ ನಾಟಕವಾಗಿದೆ. ಇದು ೧೯೬೪ ರಲ್ಲಿ ಪ್ರಕಟಗೊಂಡಿದೆ. ಮೋಟರು ಬೈಕು ಮಾರ್ಗಮಧ್ಯೆ ಕೆಟ್ಟು ಹೋಗಿ, ತರುಣರಿಬ್ಬರು ಮಾತುಕತೆ ನಡೆಸುವ ಸಂದರ್ಭವಾಗಿದೆ. ಮೋಟರು ಬೈಕು ಚಿಕಿತ್ಸೆಗೆ ಗುರಿ ಪಡಿಸಲಾಗದ ನಮ್ಮ ವ್ಯವಸ್ಥೆಯ ಸಂಕೇತವಾಗಿದೆ. ಈ ಯುವಕರ ಸಂವಾದ ಏನನ್ನೂ ಸಾಧಿಸಲಾಗದ ವ್ಯರ್ಥ ಮಾತುಗಳಾಗಿ ಮೂಡಿಬಂದಿವೆ. ಜೀವನದ ಸಂಕೀರ್ಣತೆ ಮತ್ತು ಅಸಂಗತೆಯನ್ನು ಬಿಂಬಿಸುವ ಹಲವು ಪಾತ್ರಗಳು ಈ ನಾಟಕದಲ್ಲಿ ಬರುತ್ತವೆ.

## ವೈಚಾರಿಕ ಬರಹ

### ವ್ಯಕ್ತಿ ವಿಶಿಷ್ಟ ಸಿದ್ಧಾಂತ

೧೯೬೪ ರಲ್ಲಿ ಪ್ರಕಟವಾದ ಈ ಕೃತಿಯು ವೈಚಾರಿಕತೆಯಿಂದ ಕೂಡಿದೆ. ಇದು ವ್ಯಕ್ತಿವಿಶಿಷ್ಟಸಿದ್ಧಾಂತ. ವ್ಯಕ್ತಿವಿಶಿಷ್ಟವಾದಿ, ವಿವಾಹ, ಪ್ರೇಮ ಎನ್ನುವ ಮೂರು ಲೇಖನಗಳನ್ನು ಒಳಗೊಂಡಿದೆ.

## ಕೃಷಿಚಿಂತನೆ

### ಸಹಜ ಕೃಷಿ

ಇದು ೧೯೯೨ ರಲ್ಲಿ ಪ್ರಕಟವಾಗಿದೆ. ಕೃಷಿತಜ್ಞ, ಪುಕೋಕಾನನ್ನು ಪರಿಚಯಿಸುವ ಪುಸ್ತಕವಾಗಿದೆ. ಈತನು ಜಪಾನ್ ದೇಶದವನು. ಕೃಷಿಯಲ್ಲಿ ಒಟ್ಟು ನಾಲ್ಕು ನಿಲುವುಗಳನ್ನು ವ್ಯಕ್ತಪಡಿಸಿದ್ದಾನೆ. ಈ ವಿಚಾರವು ಆಧುನಿಕ ಸಂದರ್ಭದಲ್ಲಿ ಉಪಯುಕ್ತವಾದ ಅಂಶವಾಗಿದೆ. ಅವನ ವಿಚಾರವು ಬೇಸಾಯ ಪದ್ಧತಿಯಲ್ಲಿ ಒಳ್ಳೆಯ ಫಲಿತವನ್ನು ಬೀರಿದೆ. ಅವನ ತತ್ತ್ವಗಳು ಈ ರೀತಿ ಇವೆ.

೧) ನೆಲವನ್ನು ಉಳದೆ ಬೀಜಗಳನ್ನು ಬಿತ್ತಬೇಕು.

೨) ರಾಸಾಯನಿಕ ಗೊಬ್ಬರ ಬಳಸಬಾರದು

೩) ಕಳೆ ಕೀಳಬಾರದು

೪) ಕ್ರಿಮಿನಾಶಕಗಳ ಸಿಂಪಡನೆಯನ್ನು ನಿಲ್ಲಿಸಬೇಕು ಎಂದ ತೇಜಸ್ವಿಯು ಕನ್ನಡಿಗರಿಗೆ

ಇಲ್ಲಿ ಸಹಜ ಕೃಷಿ ಪದ್ಧತಿಯನ್ನು ಆತನ ವಿಚಾರಗಳ ಮೂಲಕ ಪರಿಚಯಿಸಿದ್ದಾರೆ.

### ಪ್ರವಾಸ ಕಥನ

### ಅಲೆಮಾರಿಯಅಂಡಮಾನ್ ಮತ್ತು ಮಹಾನದಿನೈಲ್

ತೇಜಸ್ವಿಯವರ ಈ ಪ್ರವಾಸ ಕಥನವು ೧೯೯೦ ರಲ್ಲಿ ಪ್ರಕಟಗೊಂಡಿದೆ. ಈ ಪ್ರವಾಸ ಕಥನವು ೧೯೯೧ ರಲ್ಲಿ ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿಯನ್ನು ಪಡೆದಿದೆ. ೧೯೯೦, ೧೯೯೧,೧೯೯೩ ರಲ್ಲಿ ಒಟ್ಟು ಮೂರು ಮುದ್ರಣವನ್ನು ಕಂಡಿದೆ. ಈ ಪ್ರವಾಸ ಕಥನವು ಗುಲ್ಬರ್ಗ ಮತ್ತು ಕುವೆಂಪು ವಿಶ್ವವಿದ್ಯಾಲಯಗಳ ಪದವಿ ತರಗತಿಗಳಿಗೆ ಪಠ್ಯ ಪುಸ್ತಕವು ಆಗಿತ್ತು ಎಂಬುವುದು ಉಲ್ಲೇಖನಿಯ. ಅಂಡಮಾನಿನ ದ್ವೀಪಗಳು ಮತ್ತು ಆಫ್ರಿಕಾದ ನೈಲ್‌ನದಿ ಸಾಹಸಯಾತ್ರೆಯ ಕಥನವಾಗಿದೆ.

### ಅನುವಾದ: ಲೋಹಿಯಾ ಚಿಂತನೆ

ರೈತ ಸಂಘದ ಅಧ್ಯಕ್ಷ ಪ್ರೊ. ಎಂ.ಡಿ ನಂಜುಂಡಸ್ವಾಮಿ ಅವರೊಡನೆ ಕನ್ನಡಕ್ಕೆ ತಂದ ಅನುವಾದ ಗ್ರಂಥವಿದು. ರಾಮಮನೋಹರಲೋಹಿಯಾ ಅವರ ಕೆಲವು ಆಯ್ದ ಬರಹಗಳಿವೆ. ಲೋಹಿಯಾ ವಿಚಾರಗಳು ಮೊದಲಿಗೆ ಪರಿಚಯ ಆದದ್ದೇ ಈ ಪುಸ್ತಕದ ಮೂಲಕ.

### ಸಂಶೋಧನೆ ಮತ್ತು ವೈಜ್ಞಾನಿಕ ಬರವಣಿಗೆ

### ೧) ಫ್ಲೈಯಿಂಗ್ ಸಾಸರ್ಸ್ ಭಾಗ-೧

ಇದು ೧೯೯೩ ರಲ್ಲಿ ರಚಿತಗೊಂಡಿದೆ. ಹಾರುವ ತಟ್ಟೆಗಳ ಕುರಿತು ವೈಜ್ಞಾನಿಕವಾಗಿ ಹೇಳುವ ಬರವಣಿಗೆ ಆಗಿದೆ. ಮೊದಲ ದರ್ಜೆಯ ಮುಖಾಮುಖಿ ಮತ್ತು ಎರಡನೆ ದರ್ಜೆಯ ಮುಖಾಮುಖಿ ಎಂದು ಹದಿಮೂರು ಅಧ್ಯಾಯಗಳಲ್ಲಿ ತಿಳಿಸುತ್ತಾರೆ. ಖಗೋಳಶಾಸ್ತ್ರಜ್ಞರ ಅನ್ವೇಷಣೆಗಳು ಮತ್ತು ಕಾಲ್ಪನಿಕ ಜಗತ್ತಿನ ಊಹೆಗಳಲ್ಲಿ ಫ್ಲೆಯಿಂಗ್ ಸಾಸರ್ಸ್‌ಗಳು ಎಬ್ಬಿಸಿರುವ ಕುತೂಹಲಗಳನ್ನು ಚಿತ್ರ ಸಮೇತ ವಿವರಿಸುತ್ತದೆ.

### ೨) ಫ್ಲೈಯಿಂಗ್ ಸಾಸರ್ಸ್ ಭಾಗ-೨

ಇದು ೧೯೯೩ ರಲ್ಲಿ ರಚಿತಗೊಂಡಿದೆ. ಇದು ಹಾರುವ ತಟ್ಟೆಗಳ ಮೂರನೆ ದರ್ಜೆಯ ಮುಖಾಮುಖಿಯನ್ನು ತಿಳಿಸುತ್ತದೆ. ಇಟಲಿಯಲ್ಲಿ ಹೊರಲೋಕದ ಜೀವಿಗಳು, ಜಗತ್ತಿನ ನಾನಾಕಡೆಗಳಲ್ಲಿ ಆಕಾಶಲೋಕದ ಕುಬ್ಜರು, ಪರಲೋಕದ ಪ್ರೇಯಸಿಯೊಂದಿಗೆ ವಿಲ್ಲಾಸ್‌ಬೋಸನಹನಿಮೂನ್, ಕಳೆದುಹೋದ ಕಾಲ, ಆಡಮ್‌ಸ್ಕೀ ಮತ್ತು ಗಗನಯಾತ್ರಿ ಹೀಗೆ ಖಚಿತವಲ್ಲದ ಆದರೆ ನಂಬಬೇಕಾದ ಅದ್ಭುತ ಜಗತ್ತನ್ನು ಅವುಗಳ ಬಗೆಗೆ ನಡೆದ ಸಂಶೋಧನೆ, ಚರ್ಚೆ ಮುಖ್ಯವಾಗಿ ಗುರುತಿಸಲ್ಪಟ್ಟಿದೆ.

### ೩) ಮಿಸ್ಸಿಂಗ್ ಲಿಂಕ್:

೧೯೯೧ ರಲ್ಲಿ ರಚಿತವಾದ ಕೃತಿ ಆಗಿದೆ. ಇದು ಕ್ಯಾಂಪ್‌ಬೆಲ್‌ಬರ್ನಾಡ್, ಚಾರ್ಲ್ಸ್‌ಡಾರ್ವಿನ್, ಲೂಯಿಸ್‌ಲೀಕಿ, ಗೂಡಾಲ್– ಜೇನ್‌ರಂಥ ವಿಜ್ಞಾನಿಗಳ ವಿಚಾರಗಳನ್ನು ಒಳಗೊಂಡಿದೆ. ಈ ಕೃತಿಯು ಹದಿನೆಂಟು ಅಧ್ಯಾಯಗಳಲ್ಲಿ ನಿರೂಪಿಸಲಾಗಿದೆ. ೧೯೯೪ ರಲ್ಲಿ ಶಿವರಾಮಕಾರಂತ ಪ್ರಶಸ್ತಿಯನ್ನು ಪಡೆದಿದೆ.

## ವಿಸ್ಮಯ ಮಾಲಿಕೆ

ವಿಸ್ಮಯ ಮಾಲಿಕೆಯಲ್ಲಿ ಮೂರು ಭಾಗಗಳಲ್ಲಿ ತೇಜಸ್ವಿಯವರು ಪರಕಾರಪ್ರದೀಪಕೆಂಜಿಗೆಯವರೊಂದಿಗೆ ಸೇರಿ ರಚಿಸಿದ್ದಾರೆ.

### ವಿಸ್ಮಯ ಭಾಗ–೧

ವಿಸ್ಮಯ ಭಾಗ ೧೯೯೩ರಲ್ಲಿ ರಚನೆಗೊಂಡಿದ್ದು ಇದು ಮೂರು ಉಪ ವಿಭಾಗವನ್ನು ಒಳಗೊಂಡಿದೆ. 'ಬ್ರಹ್ಮಾಂಡದ ಹಿನ್ನೆಲೆಯಲ್ಲಿ ಪರಿಸರ', 'ಜೀವಸ್ಥರದ ಅನಂತ ವೈವಿಧ್ಯಗಳು', 'ಸೌರಶಕ್ತಿಯ ವಿಶ್ವರೂಪ', ಎಂಬ ವಿಭಾಗಗಳಿವೆ. ಬ್ರಹ್ಮಾಂಡದ ಹುಟ್ಟು ಮತ್ತು ಸಾವು, ಭೂಮಿಯ ವಯಸ್ಸು, ಸಸ್ಯ ಮತ್ತು ಪ್ರಾಣಿಗಳ ಉದ್ಭವ, ಮರುಭೂಮಿಗಳು, ಬೆಂಕಿ ಮತ್ತು ಚಳಿಯ ನಡುವೆ ತಂಡ್ರಾ ಪ್ರದೇಶಗಳು, ಮಹಾನದಿ ಅಮೇಜಾನ್, ಕೋನಿಫರನ್ ಕಾಡುಗಳು, ಬಿಸಿಲು, ಪರಿಸರ ಪ್ರತಿರೋಧ, ಪರಿಸರವು ನಿರಂತರ ಹೊಂದಾಣಿಕೆಯೆ? ಮುಂತಾದ ವಿಚಾರಗಳು ಅಭಿವ್ಯಕ್ತಗೊಂಡಿದೆ.

### ವಿಸ್ಮಯ ಭಾಗ–೨

೧೯೯೩ ರಲ್ಲಿ ಪ್ರಕಟವಾದ ಈ ಕೃತಿಯಲ್ಲಿ ಒಟ್ಟು ಹದಿನೇಳು ಬರಹಗಳಿವೆ. ಮಹೋರಗಗಳ ಅಂತರ್ಧಾನ, ಸೈಬೀರಿಯಾದ ಪ್ರಚಂಡ ಆಸ್ಫೋಟನೆ, ಜನಸಂಖ್ಯೆ ಮತ್ತು ಪರಿಸರ, ವಿಪತ್ಕಾರಕ ವಿಷಗಳು, ಜಲಸಂಪತ್ತಿನ ಸಮಾಧಿ, ಆಪತ್ತಿನ ಅಂಚಿನಲ್ಲಿ ಒತ್ತೆಯಾಳಾಗಿ ಪರಿಸರ–ಇತ್ಯಾದಿ.

### ವಿಸ್ಮಯ ಭಾಗ–೩

೧೯೯೪ ರಲ್ಲಿ ಪ್ರಕಟವಾದ ವಿಸ್ಮಯ ಮಾಲಿಕೆಯ ಕೊನೆಯ ಪುಸ್ತಕವಾಗಿದೆ. ಅವಸಾನಗೊಂಡ ಜೀವ ಸಂಕುಲಗಳು ಮತ್ತು ಅವುಗಳ ಪುನರ್ ಅಭಿವೃದ್ಧಿಯ ವಿಚಾರಗಳು. ಅಗ್ನಿಪರ್ವತ, ಚಂಡಮಾರುತ, ಟಾರ್ನೆಡೋ ಮತ್ತು ಸಿಡಿಲಿನಂಥ ಪ್ರಾಕೃತಿಕ ಭಯಂಕರ ಶಕ್ತಿಗಳ ಪರಿಚಯಾತ್ಮಕ ಕಥನಗಳ ಬರಹಗಳು ಸುಮಾರು ೨೦ ಇವೆ.

# ಪರಿಸರ ಮತ್ತು ಜೀವ ವಿಜ್ಞಾನ

## ೧. ದಕ್ಷಿಣ ಭಾರತದ ಹಕ್ಕಿಗಳು

೧೯೯೩ ರಲ್ಲಿ ಪ್ರಕಟಗೊಂಡ ಇದು ಪಕ್ಷಿ ವೀಕ್ಷಕರ ಕೈಪಿಡಿ ಎನಿಸಿದೆ. ತೇಜಸ್ವಿಯು ಕೃಷಿ ವಿಶ್ವವಿದ್ಯಾಲಯದ ಚಕ್ರವರ್ತಿ ಅವರೊಡನೆ ಸೇರಿ ರಚಿಸಿದ ಪುಸ್ತಕ ಆಗಿದೆ.

## ೨. ಮಿಂಚುಳ್ಳಿ( ೧೯೯೪)

### ಕನ್ನಡ ನಾಡಿನ ಹಕ್ಕಿಗಳು ಭಾಗ –೧

ವರ್ಣಚಿತ್ರಗಳೊಡನೆ ಹಕ್ಕಿಗಳ ವಿವರಗಳನ್ನು ದಾಖಲಿಸಲಾದ ಇದು ಕನ್ನಡ ನಾಡಿನ ಹಕ್ಕಿಗಳ ಮಾಲಿಕೆಯ ಮೊದಲನೆ ಭಾಗವಾಗಿದೆ. ಈ ಭಾಗದಲ್ಲಿ ಮಿಂಚುಳ್ಳಿ, ಮಂಗಟ್ಟೆ ಹಕ್ಕಿ, ಮರಕುಟುಕ, ಹೂವಿನಹಕ್ಕಿ, ಪಾರಿವಾಳ, ಕಾಡುಪಾರಿವಾಳ, ಬಾಳೆಗುಬ್ಬಿ ಕೋಗಿಲೆ ಮತ್ತು ಕೆಂಬೂತ ಮುಂತಾದ ಹಕ್ಕಿಗಳ ನಿರೂಪಣೆ ಇದೆ.

## ೩. ಹೆಜ್ಜೆ ಮೂಡದ ಹಾದಿ (೧೯೯೬)

### ಕನ್ನಡ ನಾಡಿನ ಹಕ್ಕಿಗಳು ಭಾಗ–೨

ಕನ್ನಡ ನಾಡಿನ ಹಕ್ಕಿಗಳ ಮಾಲಿಕೆಯಲ್ಲಿ ಇದು ಎರಡನೆಯ ಭಾಗ ಆಗಿದೆ. ಇದರಲ್ಲಿ ಕನ್ನಡ ನಾಡಿನ ಹಕ್ಕಿಗಳ ಜೊತೆಗೆ ಅವನ್ನು ಹೋಲುವ ಇತರೆ ನಾಡು–ದೇಶಗಳ ಪಕ್ಷಿಗಳ ಪರಿಚಯ ಕೂಡ ಇದೆ. ಸೌರೋಲೋಪಸ್, ಜವುಗಿನ ಹಕ್ಕಿಗಳು, ಗಿಳಿಗಳು, ಟ್ರೋಜನ್ ಮತ್ತು ಆಫ್ರಿಕಾದಮೂಷಿಕ, ಕಾಡುಕೋಳಿಗಳು, ಚಿಟ್ಟುಕೋಳಿಗಳು, ನೀರಿನಹಕ್ಕಿ, ಟುವ್ವಿ, ಮಡಿವಾಳಹಕ್ಕಿ ಮುಂತಾದ ವಿವಿಧ ಜಾತಿಯ ಪಕ್ಷಿಗಳ ನಿರೂಪಣೆಯಿದೆ.

## ೪. ಹಕ್ಕಿಪುಕ್ಕ( ೧೯೯೭)

೧೯೧ ಪುಟಗಳಲ್ಲಿ ೧೯೧ ಪಕ್ಷಿಗಳ ಪರಿಚಯ ಮಾಡಿಕೊಡುವ ಪುಸ್ತಕ. ಪ್ರತಿ ಪುಟದಲ್ಲಿಯೂ ಒಂದೊಂದು ವರ್ಣಚಿತ್ರ ಇದೆ. ಹಕ್ಕಿಯ ಗಾತ್ರ, ರೂಪ, ಸ್ವಭಾವ, ತೆಗೆದುಕೊಳ್ಳುವ ಆಹಾರ, ಗೂಡುಕಟ್ಟಿಕೊಳ್ಳುವ ರೀತಿ, ಸಂತಾನೋತ್ಪತ್ತಿ, ವಲಸೆ, ವಾಸಿಸುವ ಪ್ರಾದೇಶಿಕ ನಕ್ಷೆ– ಹೀಗೆ ಅನೇಕ ವಿಚಾರಗಳನ್ನು ಸಂಕ್ಷಿಪ್ತ ರೂಪದಲ್ಲಿ ಕೊಡಲಾಗಿದೆ. ಹಕ್ಕಿಗಳಿಗೆ ಜನಬಳಕೆಯ ಹೆಸರನ್ನು ಕೊಟ್ಟು ಕೆಳಗೆ ಅವುಗಳ ಇಂಗ್ಲೀಷ್ ಹೆಸರನ್ನು ಕೊಡಲಾಗಿದೆ. ಇಂಗ್ಲೀಷ್‌ನಲ್ಲಿ ಸಲೀಂ ಆಲಿಯವರ ' ದಿ ಬುಕ್ ಆಫ್ ಇಂಡಿಯನ್ ಬರ್ಡ್ಸ್' ಪುಸ್ತಕವಿದ್ದರೂ ಕನ್ನಡದ ಮಟ್ಟಿಗೆ ಇದೊಂದೇ ಪುಸ್ತಕ ಎಂದು ಹೇಳಬಹುದು.

## ಮಿಲನಿಯಂ ಮಾಲೆ

1) ಹುಡುಕಾಟ
2) ಜೀವನ ಸಂಗ್ರಾಮ
3) ಪೆಸಿಫಿಕ್ ದ್ವೀಪಗಳು
4) ಚಂದ್ರನ ಚೂರು
5) ನೆರೆಹೊರೆಯ ಗೆಳೆಯರು
6) ಮಹಾಯುದ್ಧ–1
7) ಮಹಾಯುದ್ಧ–2
8) ಮಹಾಯುದ್ಧ–3
9) ದೇಶ ವಿದೇಶ–1
10) ದೇಶ ವಿದೇಶ–2
11) ದೇಶ ವಿದೇಶ–3
12) ದೇಶ ವಿದೇಶ–4
13) ವಿಸ್ಮಯ ವಿಶ್ವ –1
14) ಮಹಾ ಪಲಾಯನ–1
15) ವಿಸ್ಮಯ ವಿಶ್ವ –2
16) ಅಡ್ವೆಂಚರ್

## ಅನ್ಯ ಭಾಷೆಗಳಿಗೆ ಅನುವಾದಗೊಂಡಿರುವ ಕೃತಿಗಳು

**೧) ಅಬಚೂರಿನ ಪೋಸ್ಟಾಫೀಸು**

ಮರಾಠಿ, ಹಿಂದಿ, ಮಲೆಯಾಳಂ ಮತ್ತು ಇಂಗ್ಲೀಷ್ ಭಾಷೆಗಳಿಗೆ ಭಾಷಾಂತರಗೊಂಡಿದೆ.

**೨) ನಿಗೂಢ ಮನುಷ್ಯರು:**

ಇಂಗ್ಲೀಷಿಗೆ ಅನುವಾದಗೊಂಡು ಪೆಂಗ್ವಿನ್ ಪ್ರಕಾಶನದಿಂದ ಪ್ರಕಟವಾಗಿದೆ.

**೩) ಕರ್ವಾಲೊ:**

ಇಂಗ್ಲೀಷಿನಲ್ಲಿ ಇದರ ಎರಡು ಭಾಷಾಂತರಗಳು ಪೆಂಗ್ವಿನ್ ಮತ್ತು ಗುರುತ್ಮನ್ ಪ್ರಕಾಶನಗಳಿಂದ ಪ್ರಕಟವಾಗಿದೆ. ಜಪಾನಿ ಭಾಷೆಗೂ ಅನುವಾದವಾಗಿ ಪ್ರಕಟವಾಗಿದೆ.

**೪) ಚಿದಂಬರ ರಹಸ್ಯ :–**

ತಮಿಳು, ಮರಾಠಿ ಭಾಷೆಗೆ ಅನುವಾದ ಆಗಿದೆ.

**೫) ಕಿರಗೂರಿನ ಗಯ್ಯಾಳಿಗಳು:–**

ಮಲೆಯಾಳಂ, ಹಿಂದಿ, ಇಂಗ್ಲೀಷ್ ಭಾಷೆಗಳಿಗೆ ಭಾಷಾಂತರ ಆಗಿದೆ.

## ಪ್ರಶಸ್ತಿಗಳು

* ಪ್ರಜಾವಾಣಿ ಪತ್ರಿಕೆಯ ದೀಪಾವಳಿ ವಿಶೇಷಾಂಕ ಕಥಾ ಪ್ರಶಸ್ತಿ ' ಲಿಂಗಬಂದ' ಕಥೆಗೆ.
* ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ( ಶ್ರೇಷ್ಠ ಸೃಜನಶೀಲ ಪ್ರಶಸ್ತಿ)–೧೯೮೧
  'ಕರ್ವಾಲೊ' ಕಾದಂಬರಿಗೆ ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ –೧೯೮೭
* ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ೧೯೮೮

* ಭಾರತೀಯ ಭಾಷಾ ಪರಿಷತ್‌ನ ಪ್ರಶಸ್ತಿ ೧೯೮೯ 'ಚಿದಂಬರ ರಹಸ್ಯ' ಕಾದಂಬರಿಗೆ.

* ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ೧೯೯೧ 'ಅಲೆಮಾರಿಯ ಅಂಡಮಾನ್' ಮತ್ತು ' ಮಹಾನದಿ ನೈಲ್ ' ಪ್ರವಾಸ ಕಥನಕ್ಕೆ.

* ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ೧೯೯೨ ' ಕಿರಗೂರಿನ ಗಯ್ಯಾಳಿಗಳು' ಕಥಾ ಸಂಕಲನಕ್ಕೆ.

* ಶಿವರಾಮ ಕಾರಂತ ಪ್ರಶಸ್ತಿ ೧೯೯೪ ' ಮಿಸ್ಸಿಂಗ್ ಲಿಂಕ್ ' ಕೃತಿಗೆ.

* ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ೧೯೯೪ " ಕಾಡಿನ ಕಥೆಗಳು ಭಾಗ-೨' ಕೃತಿಗೆ.

* ಕರ್ನಾಟಕ ಸರಕಾರದ ಜೀವ ವಿಜ್ಞಾನ ಮತ್ತು ಪರಿಸರದ ವಿಜ್ಞಾನದ ವತಿಯಿಂದ ಪರಿಸರ ಪ್ರಶಸ್ತಿ ೧೯೯೩ ಪರಿಸರ ಕಾಳಜಿಯ ಒಟ್ಟು ಬರಹಕ್ಕೆ.

* ಕರ್ನಾಟಕ ಸರ್ಕಾರದ ಪ್ರತಿಷ್ಠಿತ 'ಪಂಪ ಪ್ರಶಸ್ತಿ' ೨೦೦೧ ಸಮಗ್ರ ಸಾಹಿತ್ಯಕ್ಕೆ.

## ಚಲನಚಿತ್ರ-ಪ್ರಶಸ್ತಿಗಳು

೧) ಅಬಚೂರಿನ ಪೋಸ್ಟಾಫೀಸು: ರಾಷ್ಟ್ರೀಯ ಚಲನಚಿತ್ರ ಪ್ರಶಸ್ತಿ ೧೯೭೩

೨) ತಬರನ ಕಥೆ : ರಾಷ್ಟ್ರೀಯ ' ಸ್ವರ್ಣಕಮಲ' ಪ್ರಶಸ್ತಿ ಅತ್ಯುತ್ತಮ ಕಥೆ.

೩) ಕುಬಿ ಮತ್ತು ಇಯಾಲ : ರಾಜ್ಯ ಮತ್ತು ರಾಷ್ಟ್ರೀಯ ಚಲನಚಿತ್ರ ಪ್ರಶಸ್ತಿ, ಅತ್ಯುತ್ತಮ ಕಥೆ, ಸಂಭಾಷಣೆಗೆ ಚಿನ್ನದ ಪದಕ ೧೯೯೦.

## ನಾಟಕ ರೂಪಾಂತರಗಳು

೧) ತಬರನ ಕಥೆ: ಆರ್. ನಾಗೇಶ್ ಅವರಿಂದ, ಪ್ರತಿಭಾ ನಾಟಕ ಪ್ರಕಾಶನ, ಬೆಂಗಳೂರು, ೧೯೮೬

೨) ಕಿರಗೂರಿನ ಗಯ್ಯಾಳಿಗಳು : ಎ.ಎನ್.ರಾವ್ ಜಾದವ್ ಅವರಿಂದ, ನವಕರ್ನಾಟಕ ಪ್ರಕಾಶನ, ಬೆಂಗಳೂರು, ೧೯೯೯

೩) ಕೃಷ್ಣೇಗೌಡನ ಆನೆ : ಆರ್. ನಾಗೇಶ್ ನಿರ್ದೇಶನದಲ್ಲಿ ' ರಂಗಾಯಣ' ದಿಂದ ಪ್ರದರ್ಶನಗೊಂಡಿದೆ.

## ಅಡಿ ಟಿಪ್ಪಣಿಗಳು

೧) ರಮೇಶ್ ಬೆ.ಗೋ. 'ಪೂರ್ಣಚಂದ್ರ ತೇಜಸ್ವಿ' ದಿವ್ಯಚಂದ್ರ ಪ್ರಕಾಶನ ಬೆಂಗಳೂರು ೨೦೦೭. ಪು.ಸಂ-೧೭

೨) ರಮೇಶ್ ಬೆ.ಗೋ. 'ಪೂರ್ಣಚಂದ್ರ ತೇಜಸ್ವಿ' ದಿವ್ಯಚಂದ್ರ ಪ್ರಕಾಶನ ಬೆಂಗಳೂರು ೨೦೦೭. ಪು.ಸಂ-೧೮

೩) ರಮೇಶ್ ಬೆ.ಗೋ. 'ಪೂರ್ಣಚಂದ್ರ ತೇಜಸ್ವಿ' ದಿವ್ಯಚಂದ್ರ ಪ್ರಕಾಶನ ಬೆಂಗಳೂರು ೨೦೦೭. ಪು.ಸಂ-೧೯

೪) ಪ್ರಹ್ಲಾದ್ ಡಿ.ವಿ (ಸಂ) 'ತೇಜಸ್ವಿ ಲೋಕ' ಸಂಚಯ ಪ್ರಕಾಶನ ಬೆಂಗಳೂರು ೨೦೦೭ ಪು.ಸಂ-೮

೫) ಪ್ರಹ್ಲಾದ್ ಡಿ.ವಿ (ಸಂ) 'ತೇಜಸ್ವಿ ಲೋಕ' ಸಂಚಯ ಪ್ರಕಾಶನ ಬೆಂಗಳೂರು ೨೦೦೭ ಪು.ಸಂ-೮

೬) ಪ್ರಹ್ಲಾದ್ ಡಿ.ವಿ (ಸಂ) 'ತೇಜಸ್ವಿ ಲೋಕ' ಸಂಚಯ ಪ್ರಕಾಶನ ಬೆಂಗಳೂರು ೨೦೦೭ ಪು.ಸಂ-೧೩

೭) ಪ್ರಹ್ಲಾದ್ ಡಿ.ವಿ (ಸಂ) 'ತೇಜಸ್ವಿ ಲೋಕ' ಸಂಚಯ ಪ್ರಕಾಶನ ಬೆಂಗಳೂರು ೨೦೦೭ ಪು.ಸಂ-೩೮

*******************************

# ಅಧ್ಯಾಯ –೩

# ತೇಜಸ್ವಿ ಕಾದಂಬರಿಗಳಲ್ಲಿ ಸಾಮಾಜಿಕ ಪ್ರಜ್ಞೆ

## ೩.೧. ಚಿದಂಬರ ರಹಸ್ಯ ಮತ್ತು ಸಾಮಾಜಿಕ ಪ್ರಜ್ಞೆ

## ೩.೨. ಜುಗಾರಿ ಕ್ರಾಸ್ ಮತ್ತು ಸಾಮಾಜಿಕ ಪ್ರಜ್ಞೆ

# ಅಧ್ಯಾಯ-೩

# ತೇಜಸ್ವಿ ಕಾದಂಬರಿಗಳಲ್ಲಿ ಸಾಮಾಜಿಕ ಪ್ರಜ್ಞೆ

'ಕಾದಂಬರಿ' ಎಂಬುವುದು ಅತ್ಯಂತ ಸ್ವತಂತ್ರವಾದ, ಸ್ವಚ್ಛಂದವಾದ ನಿರ್ಮಾಣದಿಂದಾದ ಸಾಹಿತ್ಯ ಪ್ರಕಾರ. ಕಾದಂಬರಿಯನ್ನು 'ಕರತಲರಂಗಭೂಮಿ' ಎಂದು ಔಚಿತ್ಯ ಪೂರ್ಣವಾಗಿ ಕರೆಯಲಾಗಿದೆ. ಈ ಮಾತು ಕಾದಂಬರಿಯ ಸರಳತೆ, ಸ್ವತಂತ್ರ, ಸ್ವಚ್ಛಂದತೆಯನ್ನು ಕುರಿತು ಹೇಳುತ್ತದೆ. ಕಾದಂಬರಿಯು ಘಟನೆಗಳು ಮತ್ತು ಕ್ರಿಯೆಗಳೊಡನೆ ಅನುಭವಿಸಿದ ಮತ್ತು ಮಾಡಿದ ಸಂಗತಿಗಳನ್ನು ಒಳಗೊಂಡಿರುತ್ತದೆ. ಇವು ಜನ ಜೀವನದಲ್ಲಿ ಉಂಟಾಗಿ ಕಾದಂಬರಿಯ ಪಾತ್ರಗಳಾಗುತ್ತವೆ. ಈ ನಿಟ್ಟಿನಲ್ಲಿ ತೇಜಸ್ವಿಯವರ ಕಾದಂಬರಿಗಳಲ್ಲಿ ಪಾತ್ರಗಳ ಸಂಭಾಷಣೆ, ಶೈಲಿ, ಜೀವನದ ಬಗೆಗಿನ ಒಂದು ನಿಶ್ಚಿತ ದೃಷ್ಟಿ, ಬದುಕಿನ ಕೆಲವು ಸಮಸ್ಯೆಗಳು ನಿರೂಪಿಸಲ್ಪಟ್ಟಿರುತ್ತವೆ. ನವಿರಾದ ನಿರೂಪಣೆ, ವಸ್ತುವನ್ನುಸಂಬದ್ಧವಾಗಿ, ಪರಿಣಾಮಕಾರಿಯಾಗಿ ನಿರೂಪಿಸುವ ಮನಸ್ಥಿತಿಯನ್ನು ಕಾದಂಬರಿಗಳಲ್ಲಿ ಗುರುತಿಸಬಹುದು.

ತೇಜಸ್ವಿಯವರು, ನವ್ಯ ಸಾಹಿತ್ಯದ ಉತ್ಕರ್ಷದ ಸಮಯದಲ್ಲಿ ತಮ್ಮ ಬರವಣಿಗೆಯನ್ನು ಪ್ರಾರಂಭಿಸಿದರೂ ಕೂಡ ಅದರಿಂದ ವಿಭಿನ್ನವಾಗಿ ಬರೆಯ ತೊಡಗುತ್ತಾರೆ. ಈ ಬರವಣಿಗೆಯು ಅವರ ಅಂತರಂಗಿಕ ಸಂಶೋಧನೆಗಿಂತ ಹೆಚ್ಚಾಗಿ, ಬಾಹ್ಯಗೋಚರ ಚಟುವಟಿಗಳೇ ಪ್ರಾಧಾನ್ಯ ಪಡೆಯುತ್ತವೆ. ಇದರ ಪರಿಣಾಮದಿಂದ ಮನುಷ್ಯ- ಮನುಷ್ಯ ಸಂಬಂಧದ ಮೇಲುನೋಟದ ಪದರಗಳಲ್ಲಿ ವೈಪರೀತ್ಯಗಳು ಮುಖ್ಯ ಕಾಳಜಿಯಾಗಿ ಇವರ ಬರಹದಲ್ಲಿ ಕಾಣುತ್ತದೆ. ಇವರ ಆಸಕ್ತಿಯು ವ್ಯಕ್ತಿಯಿಂದ ಸಮಾಜಕ್ಕೆ, ಮನುಷ್ಯ ಸಮಾಜದಿಂದ ಪರಿಸರಕ್ಕೆ ಚಲಿಸುತ್ತದೆ. ಈ ಮೂರು ಆಯಾಮಗಳು ಒಂದರೊಳಗೊಂದು ಐಕ್ಯತೆಯನ್ನು ಹೊಂದುತ್ತಾ ಮುಂದುವರೆಯುವುದನ್ನು ಕಾಣುತ್ತೇವೆ. ಆದರೆ ಕಾಲದೃಷ್ಟಿಕೋನದಲ್ಲಿ ನೋಡಿದಾಗ ಅದು ಪಡೆದುಕೊಂಡಿರುವ ಒತ್ತು ಮತ್ತು ಪ್ರಾಧಾನ್ಯದಲ್ಲಿ ಆಗಿರುವ ವ್ಯತ್ಯಾಸವನ್ನು ಗುರುತಿಸಬಹುದು.

ಈ ನಿಟ್ಟಿನಲ್ಲಿ ಅವರ ಎರಡು ಕಾದಂಬರಿಗಳನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಅವುಗಳಲ್ಲಿ ಒಂದು "ಚಿದಂಬರರಹಸ್ಯ" ಮತ್ತೊಂದು "ಜುಗಾರಿಕ್ರಾಸ್". ಇವೆರಡು ಕಾದಂಬರಿಗಳಲ್ಲಿ ಸಾಮಾಜಿಕ ಪ್ರಜ್ಞೆ, ಸಾಮಾಜಿಕ ಚಿಂತನೆ, ಸಾಮಾಜಿಕ ನಿಲುವು- ಧೋರಣೆ ಹೇಗೆ ನಿರೂಪಿತಗೊಂಡಿದೆ ಎಂಬುವುದನ್ನು ಇಲ್ಲಿ ಪ್ರತ್ಯೇಕ ಅಧ್ಯಯನಕ್ಕೆ ಒಳಪಡಿಸಲಾಗಿದೆ.

## ೨.೩. ಚಿದಂಬರ ರಹಸ್ಯ ಮತ್ತು ಸಾಮಾಜಿಕ ಪ್ರಜ್ಞೆ

'ಚಿದಂಬರರಹಸ್ಯ' ಕನ್ನಡದ ಅತ್ಯುತ್ತಮ ಕಾದಂಬರಿಗಳಲ್ಲಿ ಒಂದಾಗಿದೆ. ಇದು

೧೯೮೫ ರಲ್ಲಿ ರಚಿತವಾಗಿದೆ. ತೇಜಸ್ವಿಯವರು ಕನ್ನಡ ಸಾಹಿತ್ಯದ ವಿಭಿನ್ನ ಕಾಲಘಟ್ಟದಲ್ಲಿ ಬರೆಯುತ್ತಾ ಬಂದರೂ ತಮ್ಮದೇ ಆದ ಹಾದಿಯನ್ನು ನಿರ್ಮಿಸಿಕೊಂಡವರು. ಚಿದಂಬರ ರಹಸ್ಯ ಕಾದಂಬರಿ 'ಕೆಸರೂರಿನ' ಅವನತಿಯನ್ನು ಒಂದು ಸಂಕೇತ ಎಂಬಂತೆ ಚಿತ್ರಿಸಿದೆ. ಕೆಸರೂರು ವಿಶ್ವದ ಭಾಗವಾಗಬಹುದು ಅಥವಾ ನಮ್ಮ ದೇಶವೇ ಆಗಬಹುದು. ವಿಮರ್ಶಕರು ಒಂದು ಸಮಾಜದ ಆರ್ಥಿಕ, ಸಾಂಸ್ಕೃತಿಕ ಅವನತಿಯ ಕತೆ ಎಂದು ಗುರುತಿಸುತ್ತಾರೆ. ಕೆಸರೂರಿನ ಅವನತಿ ಕೇವಲ ಕತೆ ಬೆಳೆದಂತೆಲ್ಲಾ ಬೆಳೆದದ್ದು ಎಂಬುವುದಕ್ಕಿಂತ ಅದು ಕೆಸರೂರಿನ ಮಟ್ಟಿಗೆ ಶತಮಾನದಿಂದ ಇದ್ದದ್ದು ಎಂಬ ವಿವರಣೆ ನಮಗೆ ಸಿಗುತ್ತದೆ.

ಒಂದು ಸಮಾಜದ ಸಾಂಸ್ಕೃತಿಕ ಅಭಿವ್ಯಕ್ತಿ ಒಬ್ಬ ಅಸಾಧಾರಣ ವ್ಯಕ್ತಿ ರೂಪುಗೊಳ್ಳುವುದರ ಮೂಲಕ ಆಗುತ್ತದೆ ಎಂಬುವುದನ್ನು ತಿಳಿದಾಗ, ಅದರ ಅರ್ಥ ಈ ಹಿಂದೆಯೇ ಕೆಸರೂರು ಸಾಂಸ್ಕೃತಿಕವಾಗಿ, ಆರ್ಥಿಕವಾಗಿ ಶತ-ಶತಮಾನದ ಹಿಂದೆಯೇ ಜಡವಾಗಿತ್ತು ಎಂಬ ಅಂಶ ನಮಗೆ ಸ್ಪಷ್ಟ ಆಗುತ್ತದೆ.

ಒಂದು ಸಮಾಜದ ಅವನತಿ ಸಾಂಸ್ಕೃತಿಕ ಮತ್ತು ಆರ್ಥಿಕ ಕಾರಣಗಳೆರಡರಿಂದ ಘಟಿಸಬಹುದಾದದ್ದು ಎಂಬುವುದನ್ನು ತೇಜಸ್ವಿ ಸ್ಪಷ್ಟವಾಗಿ ತಿಳಿಸಿದ್ದಾರೆ. ಅಲ್ಲದೆ "ಕಾದಂಬರಿ ವಿಜ್ಞಾನ, ತತ್ವಜ್ಞಾನ, ಸಮಾಜದ ಮೂಢನಂಬಿಕೆಗಳು. ರಾಜಕೀಯ ಸಿದ್ಧಾಂತ, ಚಟುವಟಿಕೆಗಳು ಇವು ತಮ್ಮ ತಮ್ಮ ಹಾದಿಯಲ್ಲಿ ರಹಸ್ಯವನ್ನು ಅರಿಯುವ ಸತ್ಯವನ್ನು ಅನ್ವೇಷಿಸುವ ಕ್ರಿಯೆಯಲ್ಲಿ ತೊಡಗುತ್ತದೆ."[೧] ಎಂದು ಎಂ.ಎಚ್. ಕೃಷ್ಣಯ್ಯ ಅಭಿಪ್ರಾಯ ಪಡುತ್ತಾರೆ. ಕೆಸರೂರಿನ ಅವನತಿಯನ್ನು ಗುರುತಿಸಿಕೊಳ್ಳುವಾಗ ತೇಜಸ್ವಿಯವರು ಎತ್ತಿರುವ ಸಾಂಸ್ಕೃತಿಕ ಹಾಗೂ ತಾತ್ತ್ವಿಕ ಪ್ರಶ್ನೆಗಳು ಮಹತ್ತ್ವದಾಗಿ ತೋರುತ್ತದೆ. ಒಬ್ಬ ವ್ಯಕ್ತಿ ವಿಶಿಷ್ಟ ಪ್ರಜ್ಞೆಯಲ್ಲಾಗಲಿ, ನೇರ ಸಾಮಾಜಿಕ ಪ್ರಕ್ರಿಯೆ ಮಾದರಿಯಲ್ಲಾಗಲೀ ಅಥವಾ ಕಾದಂಬರಿಗಾರನ ಪೂರ್ವಗ್ರಹದಲ್ಲಾಗಲಿ ಕಳೆದು ಹೋಗದಂತಹ ಅನುಭವ ಈ ಕಾದಂಬರಿಯಲ್ಲಿ ಚಿತ್ರಿತವಾಗಿದೆ.

ಸೂಕ್ಷ್ಮವಾಗಿ ಅವಲೋಕಿಸಿದಾಗ ಕೆಸರೂರಿನ ಅವನತಿ ಪ್ರಾರಂಭವಾದದ್ದು ಸುಲೇಮಾನ್‌ಬೇರಿಗೆ ಕಾಡನ್ನು ಕಡಿಯಲು ಅವಕಾಶ ಕೊಟ್ಟಾಗ. ಇಲ್ಲಿಯ ಕಾಡನ್ನು ಕಡಿದುದರ ಪರಿಣಾಮದಿಂದ ಲಂಟಾನಾ ಬೆಳೆಯಿತು. ಇದರಿಂದ ಏಲಕ್ಕಿ ಬೆಳೆಯಲ್ಲಿ ವೈಪರೀತ್ಯ ಉಂಟಾಯಿತು. ಮಾತ್ರವಲ್ಲದೆ ಆರ್ಥಿಕ ಮುಗ್ಗಟ್ಟು ಕೂಡ ಉಂಟಾಯಿತು. ಇದರ ಅಪಾಯವನ್ನು ಅರಿತೋ ಅಥವಾ ಅರಿಯದೆಯೋ ವರ್ತಿಸಿದ ಕೆಸರೂರಿನ ಸಮಾಜದ ಸಾಂಸ್ಕೃತಿಕ, ಬೌದ್ಧಿಕ ದಿವಾಳಿತನವೇ ಯಸೂಫ್‌ಬೇರಿಗೆ ಕಾಡನ್ನು ಕೊಡಿಸಿದ್ದು. ಈ ಬೇರಿಯ ಕೃತ್ಯ ಏಲಕ್ಕಿಯ ಕತ್ತನ್ನು ಹಿಚುಕುವ ಮೂಲಕ ಕೆಸರೂರಿನ ಸಮಾಜವೇ ಪರೋಕ್ಷವಾಗಿ ತನ್ನ ಅವನತಿಗೆ ನಾಂದಿ ಹಾಡಿದ ಹಾಗೆ ಆಗುತ್ತದೆ.

ಕಾದಂಬರಿಯಲ್ಲಿ ಹೊಡೆದಾಟ, ಸಾವು, ಬೆದರಿಕೆ, ಜಾತಿ ವೈಷಮ್ಯ, ಸುಲಿಗೆ, ಹೀಗೆ ಜನಪ್ರಿಯ ಸಾಹಿತ್ಯದ ಎಲ್ಲ ಅಂಶಗಳನ್ನು, ಲಘು ಸಾಹಿತ್ಯದ ಹಾಸ್ಯ, ಹಾರಾಟದಂಥ ಅಂಶಗಳನ್ನು ಯಾವ ಸಂಕೋಚವೂ ಇಲ್ಲದಂತೆ ಸಲೀಸಾಗಿ, ಮುಕ್ತವಾಗಿ ಬಳಸಿಕೊಳ್ಳುವ ತೇಜಸ್ವಿ ಅವುಗಳ ಸಕಾಲಿಕ ನಿರಾಕರಣೆಯಲ್ಲೂ ತೋರುವ ಕಲಾತ್ಮಕ ಜಾಣ್ಮೆ ಚಿದಂಬರ ರಹಸ್ಯ ಕಾದಂಬರಿಯನ್ನು ಕನ್ನಡದ ಕಾದಂಬರಿಗಳಲ್ಲಿ ಒಂದನ್ನಾಗಿ ಮಾಡಿದೆ. ಕೆಸರೂರಿನ ಏಲಕ್ಕಿ ಗುಡ್ಡದ ಸುತ್ತ ಈ ಕಾದಂಬರಿಯ ಕ್ರಿಯೆಗಳು ಸಾಗುತ್ತವೆ.

ಒಂದು ರೀತಿಯಲ್ಲಿ ರಚನಾತ್ಮಕ ಕ್ರಿಯೆಯಲ್ಲಿ ಅಭಿವ್ಯಕ್ತಗೊಳ್ಳುತ್ತದೆ. ಜನರ ಮನೋಭಾವ, ಧೋರಣೆ, ಅಭಿಲಾಷೆಗಳು ಅಲ್ಲಿಯ ಸಮಾಜವನ್ನು ಕೇಂದ್ರಿಕರಿಸುತ್ತಾ ಹೋಗುತ್ತದೆ. ಏಲಕ್ಕಿ ಬೆಳೆಗೆ ರೋಗ ತಗುಲಿದಂತೆ, ಕೆಸರೂರಿನ ಸಮಾಜವೂ ಸಂಸ್ಕೃತಿಯೂ ರೋಗಗ್ರಸ್ತವಾಗುತ್ತದೆ. ಮನುಷ್ಯನ ಸ್ವಾರ್ಥ ಲಾಲಸೆಗಳಿಂದ ಅಲ್ಲಿಯ ಪ್ರಕೃತಿಯು ನಾಶ ಹೊಂದುತ್ತದೆ. ಕಾಡುನಾಶವಾಗಿ ನಾಡು ಬೆಳೆಯುತ್ತದೆ. ಇಲ್ಲಿ ಅಂತರ್ಗತವಾಗಿರುವ ಗಾಢ ವಿಷಾದವು ಸಿನಿಕತೆಗೆ ಅಥವಾ ಭಾವುಕತೆಗೆ ಇಳಿಯದಂತೆ ಆರೋಗ್ಯಕರ ಪ್ರತಿರೋಧಗಳನ್ನು ಒಡ್ಡಿರುವಂತೆ ಕಂಡು ಬರುತ್ತದೆ. ಗಾಂಭೀರ್ಯತೆ ಮತ್ತು ವಿನೋದಗಳನ್ನು ತೂಗಿಸಿಕೊಂಡು ಹೋಗಬಲ್ಲ ಸಾಮರ್ಥ್ಯವೇ ತೇಜಸ್ವಿಯವರಿಗೆ ಹಲವು ಧೋರಣೆ– ದೃಷ್ಟಿಕೋನವನ್ನು ಹಿಡಿಯುವಲ್ಲಿ ಸಹಾಯ ಮಾಡಿದೆ. ಕೆಸರೂರಿನ ಅವನತಿಯಷ್ಟೇ ಲೇಖಕರಿಗೆ ಮುಖ್ಯವಾಗುವುದಿಲ್ಲ. ಕೆಸರೂರಿನ ಬದುಕಿನ ವಿವಿಧ ಸಾಧ್ಯತೆಗಳ ಬಗ್ಗೆ ಲೇಖಕರಿಗಿರುವ ಪ್ರೀತಿ– ಉತ್ಸಾಹಗಳು ಕಡಿಮೆ ಆಗುವುದಿಲ್ಲ. ಈ ಕಾರಣದಿಂದಲೇ ತೇಜಸ್ವಿ ಆಶಾವಾದಿಯೂ ಅಲ್ಲ, ನಿರಾಶಾವಾದಿಯೂ ಅಲ್ಲ.

ಕಾದಂಬರಿಯಲ್ಲಿ ನಿಗೂಢವಾದ ಸತ್ಯವನ್ನು ಅನ್ವೇಷಿಸುವ ದೃಷ್ಟಿಯಿಂದ ಇಲ್ಲಿ ಎರಡು ಬಗೆಯ ದಾರಿಯನ್ನು ಬಳಸುವುದನ್ನು ಗುರುತಿಸಬಹುದು. ಹಾಗೆಯೇ ಸಾವಿರಾರು ಎಳೆಗಳು ಒಂದಕ್ಕೊಂದು ಕೊಂಡಿ ಎಂಬಂತೆ ಬೆಸೆದುಕೊಂಡಿರುತ್ತದೆ. ಈ ಇಡೀ ಕಾದಂಬರಿಗೆ ಬಂಧವಾಗಿರುವುದು ಕೆಸರೂರು ಹೈಬ್ರಿಡ್ ಕೆಸರೂರು ದೊಂಬಿಯ ತಾಣವಾಗಿ ಬಿಡುತ್ತದೆ. ಅದರಂತೆ ಕೊಲೆಗಳು, ಪ್ರತಿ ಕೊಲೆಗಳು ಸಾಮಾನ್ಯವಾಗಿರುತ್ತದೆ. ಕೆಸರೂರಿಗೆ ಬೆಂಕಿ ಬಿದ್ದಾಗಲೂ ಕೂಡ ರಫಿ ಮತ್ತು ಜಯಂತಿ ಪಾರಾಗಲು ಯತ್ನಿಸಿದ ಸಂದರ್ಭದಲ್ಲಿ ಅವರಿಗೆ ಹೈಬ್ರಿಡ್ ಏಲಕ್ಕಿ ಗಿಡ ಕಾಣಿಸಿಕೊಳ್ಳುತ್ತದೆ. ಅಂದರೆ ಆ ಸಮಯದಲ್ಲಿ ಅವರಿಗೆ ಒಂದು ಹೊಸ ಆಲೋಚನೆ ಉಂಟಾಗುತ್ತದೆ. ಆದಾಯವಾಗಿರುವ ಏಲಕ್ಕಿ ಗಿಡ ನಾಶವಾಗಿ ಹೋಗುತ್ತದೆಯೋ ಎಂಬ ಆತಂಕ ಮನಸ್ಸಿಗೆ ಬಂದು ಬಿಡುತ್ತದೆ. ಈ ಕಾರಣದಿಂದಾಯೇ ಅವರು ಬೆಟ್ಟದ ತುದಿಯೇರುತ್ತಾರೆ. ಆಗ ಜಯಂತಿ (ಕೃಷ್ಣೇಗೌಡನ ಮಗಳು) ಹೇಳುತ್ತಾಳೆ, "ನೋಡು ಜೇನುಕಲ್ಲು ಗುಡ್ಡದ ತುದಿ ಚೆನ್ನಾಗಿ ಕಾಣಿಸ್ತದೆ. ಕೆಸರೂರಿನ ಜನ ಈಗಲೂ ಎಲ್ಲ ಅಲ್ಲಿಗೆ ಓಡಿದರೆ

ಬೆಂಕಿಯಿಂದ ತಪ್ಪಿಸಿಕೊಳ್ಳಬಹುದು."[೨] ಅದಕ್ಕೆ ರಫಿ " ನಮಗೆ ಕಾಣುತ್ತದೆ ಅವರಿಗೆ ಕಾಣ್ತದ? ಈ ಹೊಗೇಲಿ" [೩] ಎನ್ನುತ್ತಾನೆ. ಇಲ್ಲಿ ಸೂಕ್ಷ್ಮವಾಗಿ ಗಮನಿಸಿದಾಗ ಒಂದಕ್ಕೊಂದು ಆಂತರಿಕವಾಗಿ ಸಂಬಂಧ ಉಂಟಾಗುವುದನ್ನು ಗಮನಿಸಬಹುದು. ಮತ್ತು ಮನುಷ್ಯನ ಪ್ರಜ್ಞೆ ಸ್ವತಂತ್ರವಾದದ್ದೋ, ಪರಿಸರಕ್ಕೆ ಬದ್ಧವಾದದ್ದೋ ಎಂಬ ಪ್ರಶ್ನೆಗಳನ್ನು ಕೂಡ ಈ ಕಾದಂಬರಿಯ ಹಲವು ಪಾತ್ರಗಳು ಚರ್ಚಿಸುತ್ತವೆ.

ತಾವು ಕ್ರಾಂತಿಕಾರಿಗಳೆಂದು ಕರೆದುಕೊಂಡರೂ ಆ ಕ್ರಾಂತಿಯ ನಿಜವಾದ ಅರ್ಥವೇನು? ಎಂಬುವುದನ್ನು ತಿಳಿಯಲಾರರು. ಕೇವಲ ಪೊಳ್ಳು ಆದರ್ಶ ಮತ್ತು ಹುಚ್ಚು ನಂಬಿಕೆಗಳ ಬೆನ್ನಟ್ಟಿದವರು ರಾಮಪ್ಪ, ಚಂದ್ರ, ಅಂಗಾರ ಮತ್ತು ರಮೇಶ. ಆದರೆ ರಾಮಪ್ಪನು ತನ್ನ ಮಾವನ ಮನೆಯ ಪಾತ್ರಪಗಡ ಹರಾಜು ಹಾಕಬೇಕಾದ ಸ್ಥಿತಿ ಬಂದಾಗ, ಬಾಲಯ್ಯನ ಜತೆ ಜಗಳ ತೆಗೆದು ಹೊಡೆದಾಟಕ್ಕೆ ತೊಡಗುವುದು ಇವರ ಕ್ರಾಂತಿಯ ಒಳಮರ್ಮ ಏನೆಂದು ತಿಳಿಯುತ್ತದೆ. ಹಾಗೆಯೇ ಇನ್ನೊಂದು ಘಟನೆಯಲ್ಲಿ ನಡೆಯುವ ಕೃಷ್ಣೇಗೌಡನ ತೋಟದ ಕೆಲಸಗಾರರು ಮತ್ತು ಇಂಗ್ಲೀಷ್‌ಗೌಡ (ರಾಮಪ್ಪ)ನ ಬೆಂಬಲಿಗರ ನಡುವಿನ ಹೊಡೆದಾಟ ಇವರೆಲ್ಲಾ ಕಾಲೇಜು ಹುಡುಗರು ಎಂದು ತಿಳಿದಾಗ, ಕೃಷ್ಣೇಗೌಡ ಇವರ ಬಗ್ಗೆ ಉದಾರತೆಯಿಂದ ನಡೆದುಕೊಳ್ಳುವುದು. ಇಲ್ಲೆಲ್ಲ ಗಮನಿಸಿದಾಗ ಕ್ರಾಂತಿಯ ನೆಪದಲ್ಲಿ ಸಮಾಜದಲ್ಲಿ ಉಂಟಾಗುವ ತೊಡಕು ಮತ್ತು ತಮ್ಮತನಕ್ಕೆ ಎದುರಾಗುವ ಘಟನೆಗಳು, ಅಸಂಬದ್ಧ ಬೆಳವಣಿಗೆಯ ಫಲವಾಗಿ ಕಂಡು ಬರುವುದನ್ನು ಗುರುತಿಸಬಹುದು.

ಸುಲೇಮಾನ್‌ಬೇರಿಯ ಒಳಸಂಚಿನ ವ್ಯವಹಾರಗಳು ತಮಗೆ ಅನೇಕ ರೀತಿಯ ತಿಳಿವುವನ್ನು ಉಂಟು ಮಾಡುತ್ತದೆ. ಏಲಕ್ಕಿ ತೋಟವನ್ನು ಕಡಿದು ಹಾಕುವುದು, ಕಳ್ಳಸಾಗಾಣಿಕೆಯ ವ್ಯವಹಾರ, ಗುಟ್ಟಾಗಿ ಅಫೀಮು ಬೆಳೆಸಿ, ಲಂಟಾನಾ ಜಗ್ಗಿನಲ್ಲಿ ಅದನ್ನು ಮರೆಮಾಡುವ ದೇಶದ್ರೋಹಿ ಚಟುವಟಿಕೆಯಲ್ಲಿ ತೊಡಗುತ್ತಾನೆ. ಇಂತಹ ಅನ್ಯ ವ್ಯವಹಾರವು ಇಡೀ ಕೆಸರೂರಿನ ಅನಾರೋಗ್ಯವನ್ನು ತೋರಿಸುತ್ತದೆ. ಈ ದುರಂತವು ಸಾಮಾನ್ಯ ಜನರ ಜೀವನದಲ್ಲಿ ಅಡಗಿರುತ್ತದೆ ಎನ್ನುವುದು ಗಮನಿಸಬೇಕಾದ ಅಂಶವಾಗಿದೆ.

ಡಾ। ಜೋಗಿಹಾಳರ ಸಾವಿಗೆ ಮಹಮದನೇ ಕಾರಣ ಎಂಬಂತೆ ಅವನಲ್ಲಿಯೇ ಬೆಳೆಯುವ ಹಾಗೆ ಮಾಡಿದ ಸನ್ನಿವೇಶವನ್ನು ಗಮನಿಸಬೇಕು. ಏಲಕ್ಕಿ ಬೋರ್ಡಿನ ಇಂಟೆಲಿಜೆನ್ಸ್ ಆಫೀಸರ್ ಆದ ಅಂಗಾಡಿ, ಏಲಕ್ಕಿ ಬೆಳೆಯು ಕುಸಿಯಲು ಕಾರಣವೇನು ಎಂಬುವುದನ್ನು ತನಿಖೆ ಮಾಡಿ ಕೇಂದ್ರ ಸರಕಾರಕ್ಕೆ ಒಪ್ಪಿಸಲು ಬಂದಿದ್ದಾನೆ. ಆದರೆ ಕೆಸರೂರಿನಲ್ಲಿ ತನಿಖೆ ಆರಂಭಿಸಿದ ಕೂಡಲೇ ಆತನಿಗೆ ಗೊತ್ತಾಗುತ್ತದೆ ಇದು ಕೆಸರೂರಿನ ಹಲವು ಸಮಸ್ಯೆಗಳೊಂದಿಗೆ ಬೆಸೆದುಕೊಂಡಿದೆ ಎಂದು. ಅಂಗಾಡಿಗೆ ಏಲಕ್ಕಿ ಬೆಳೆ

ಕುಸಿತದ ಬಗ್ಗೆ ಜೋಗಿಹಾಳರ ಸಂಶೋಧನೆಯ ಬಗ್ಗೆ ಮತ್ತು ಅವರ ಸಾವಿನ ಬಗ್ಗೆ ಹೆಚ್ಚಿನ ಯೋಚನೆಯಾದರೆ, ಜೂನಿಯರ್ ಕಾಲೇಜಿನ ಅರ್ಥಶಾಸ್ತ್ರ ಪ್ರಾಧ್ಯಾಪಕ ಡಾ। ರಾಮಚಂದ್ರನಿಗೆ ಚಿಕ್ಕಮಗಳೂರು ಜಿಲ್ಲೆಯೇ ಒಂದು ಸಮಸ್ಯೆ ಆಗುತ್ತದೆ.

ಅಂಗಾಡಿಯ ತನಿಖೆಗೆ ವಿನೂತನ ಮಾದರಿಯೊಂದರಲ್ಲಿ ಸಹಕರಿಸುವ ಜಯರಾಮನ ಕಾಳಜಿಗಳು, ಉದ್ದೇಶಗಳು ಭಿನ್ನವಾಗಿರುತ್ತದೆ. ಹಾಗೆಯೇ ಸಾಹಿತಿಯಾದ ಜಯರಾಮನಿಗೆ ಇದು ಸಾಹಿತ್ಯಕ್ಕೆ ಸಂಬಂಧಪಟ್ಟ ಪ್ರಶ್ನೆ ಮಾತ್ರ ಅಲ್ಲ. ತನ್ನ ಈ ಬರವಣಿಗೆಯ ಮೂಲ ಪ್ರೇರಣೆ ಏನು? ಮತ್ತು ತನ್ನ ಚಟುವಟಿಕೆಗಳ ಹಿಂದಿನ ಉದ್ದೇಶಗಳ ಬಗ್ಗೆಯೂ ತಿಳಿದಿರುತ್ತಾನೆ.

“ ಮನುಷ್ಯನ ಪ್ರಜ್ಞೆ, ನಿಜವಾಗಿ ಸ್ವತಂತ್ರವೋ ? ಅಥವಾ ಅದೊಂದು ಭ್ರಮೆಯೋ? ಇಡೀ ಗ್ರಹತಾರೆ ನಿಹಾರಿಕೆಗಳ ಈ ವಿಶ್ವವೆಲ್ಲಾ ತಮ್ಮ ತಮ್ಮ ನಿಯಮಕ್ಕೆ ಬದ್ಧವಾಗಿ ವರ್ತಿಸುತ್ತದೆ. ಪ್ರತಿಯೊಂದು ಅಣು, ಪರಮಾಣುವಿನಲ್ಲೂ ಎಲೆಕ್ಟ್ರಾನುಗಳು, ಪ್ರೋಟಾನುಗಳು ತಮ್ಮ ನಿಯಮಗಳ ಸರಹದ್ದಿನಲ್ಲಿ ಸುತ್ತುತ್ತಿವೆ. ಅಂಥದರಲ್ಲಿ ಇದರಿಂದ ಹೊಮ್ಮಿದ ಪ್ರಜ್ಞೆ ನಿಯಾಮಾತೀತವೇ? ನಿಜವಾಗಿಯೂ ಸ್ವತಂತ್ರವೇ? ಇದು ನಿಜಕ್ಕೂ ಚಕಿತಗೊಳಿಸುವ ಚಿದಂಬರರಹಸ್ಯ”.[೪]

ಅಂಗಾಡಿಯ ವೈಯುಕ್ತಿಕ, ರಾಮಚಂದ್ರನ ಸಾಮಾಜಿಕ ಮತ್ತು ಜಯರಾಮನ ತಾತ್ವಿಕ ಕಾಳಜಿಗಳು ಅವರವರ ವ್ಯಕ್ತಿ ವಿಶಿಷ್ಟತೆಗೆ ಬದ್ಧವಾಗಿರುತ್ತದೆ. ಪ್ರತಿಯೊಬ್ಬರೂ ತಮ್ಮ ಬದುಕಿನ ಸಂದರ್ಭದಲ್ಲಿ ಕೆಸರೂರಿನ ವಿದ್ಯಮಾನಗಳನ್ನು ಗ್ರಹಿಸುತ್ತಿದ್ದಷ್ಟೇ ಅಲ್ಲ, ಅವರು ತಮ್ಮ ಲಾಭಕ್ಕಾಗಿ ಉಪಯೋಗಿಸುತ್ತಲೂ ಇದ್ದರು. ಏಲಕ್ಕಿ ಸಂಶೋಧನಾ ಕೇಂದ್ರದ ಮುಖ್ಯಸ್ಥರಾಗಿದ್ದ ಪಾಟೀಲರು, ಕೆಸರೂರು ಅಳಿವಿನ ಅಂಚಿಗೆ ಸರಿದು, ಹೊಸ ಸಂಸ್ಕೃತಿ ಉದ್ಭವಿಸಬಹುದು ಎಂಬುವುದರಲ್ಲಿ ನಂಬಿಕೆ ಇಟ್ಟಿದ್ದರು. ಯಾವುದೋ ಒಂದು ಗಿಡದ ಕಾಯಿಲೆಗೆ ಜಗತ್ತಿನ ಎಲ್ಲರನ್ನು ತಂದು ಗಂಟುಹಾಕುವುದು ನ್ಯಾಯವೆ? ಎಂದು ಅಂಗಾಡಿಗೆ ಮೊದಮೊದಲು ಅನಿಸಿದರೂ, ಗಿಡದ ಕಾಯಿಲೆ ಮತ್ತು ಕೆಸರೂರಿನ ಸಾಮಾಜಿಕ ಕಾಯಿಲೆಗೂ ಸಂಬಂಧ ವಿದೆಯೆಂದೇ ನಂಬಿದ್ದರು. ಇಪ್ಪತ್ತು ವರ್ಷದ ನಂತರ ಮೊದಲ ಬಾರಿಗೆ ತಾನು ಬೆಳೆದ, ಓಡಾಡಿದ ಊರು ಎಂಬುವುದನ್ನು ಬಿಟ್ಟರೆ ಅಂಗಾಡಿಗೆ ಕೆಸರೂರಿನ ಬಗ್ಗೆ ಆದರ, ಅಭಿಮಾನ, ಪ್ರೀತಿ ಇದಾವುದು ಮೂಡಿ ಬರಲಿಲ್ಲ.

ರಫಿ, ಅಂಗಾರ, ರಮೇಶ, ಇಂಗ್ಲೀಷ್ ಗೌಡ, ಗೂಗ್ಲಿ ಮುಂತಾದವರು ಪಡ್ಡೆ ಹುಡುಗರಂತೆ ಕಂಡರೂ, ಇವರಿಗೆ ಕೆಸರೂರಿನ ತುಂಬಿದೆದೆಯ ಹುಡುಗಿಯರು ತಮಗೇಕೆ ಒಲಿಯುವುದಿಲ್ಲ ಎಂದು ಭಾವಿಸುತ್ತಾರೆ. ಇದು ಬಿಡಿಸಲಾಗದ ಸಮಸ್ಯೆಯಾದರೂ ಕ್ರಮೇಣ ಅದರ ಸ್ವರೂಪವೇನು? ಎಂಬುವುದು ಅವರ ಅರಿವಿಗೆ ಬರುತ್ತದೆ. ಅದಕ್ಕೆ ಅಡ್ಡಿಯಾಗಿರುವವರು ನಮ್ಮ ದೇಶದ ಸಮಾಜ, ರಾಜಕಾರಣಿಗಳು, ಅಧಿಕಾರಶಾಹಿಗಳು,

ಸರ್ಕಾರ ಇತ್ಯಾದಿ ಎಂಬುದು ಗೊತ್ತಿರಲಿಲ್ಲ. ಆದರೆ ರಾಮಚಂದ್ರನ ಶಿಷ್ಯರಾದ ನಂತರ ಅವನ ಹೊಸ ತರ್ಕದಿಂದ ಗೊತ್ತಾಗುತ್ತದೆ. ಈ ತಾಶೀಲ್ದಾರ, ಬಿ.ಡಿ.ಓ, ಡಿ.ಸಿ, ಸಂಪನ್ನ ಶ್ರೀಮಂತರು, ಬಡ್ಡಿ ವಸೂಲಿ ಮಾರ್ವಾಡಿಗಳು ತಮ್ಮ ಅದೃಶ್ಯಹಸ್ತದಿಂದ ಅಡ್ಡಿಪಡಿಸುತ್ತಿರುವ ವೈರಿಗಳೆಂದು ಇದೆಲ್ಲವನ್ನು ಅವರು ಕ್ರೋಢೀಕರಿಸಿಯೇ " ಒಟ್ಟಿನಲ್ಲಿ ಕ್ರಾಂತಿಯಾಗಬೇಕು" [೫] ಎಂಬ ತೀರ್ಮಾನಕ್ಕೆ ಬರುತ್ತಾರೆ.

ಜಯರಾಮನ ವಿಚಾರದಲ್ಲಿಯೂ ಕೂಡ ಅವನ ಗೆಳೆಯರು ಉತ್ಸುಕರಾಗುತ್ತಾರೆ. ಇಲ್ಲಿ ಅವರು ನೋಡುವ ದೃಷ್ಟಿಕೋನಕ್ಕೆ ತಕ್ಕಂತೆ ರೂಪುಗೊಳ್ಳುತ್ತದೆ, ಎಂಬ ಸೂಕ್ಷ್ಮ ತತ್ತ್ವ ನಮಗೆ ಉಂಟಾಗುತ್ತದೆ. ಇವರ ಒಟ್ಟು ತಾತ್ಪರ್ಯದಿಂದ ತೇಜಸ್ವಿಯವರು ಸತ್ಯ ಅಥವಾ ಅರ್ಥ ಏಕವಲ್ಲ, ಅನೇಕ ಎಂಬ ಗಾಢ ತಿಳುವಳಿಕೆಯನ್ನು ನಮಗೆ ಉಂಟು ಮಾಡುತ್ತಾರೆ. ಹೀಗಾಗಿ ಮನುಷ್ಯನ ಪ್ರಯತ್ನಗಳನ್ನು, ಅವುಗಳ ಇತಿಮಿತಿಗಳಲ್ಲಿ ದಾಖಲಿಸುತ್ತಾರೆ. ಇದೇ ಸತ್ಯ, ಇದೇ ಅರ್ಥ ಎಂಬ ಅಹಂಕಾರವನ್ನು ಖಂಡಿಸುತ್ತಾರೆ.

ಕೆಸರೂರಿನ ಪ್ರಕೃತಿಯಲ್ಲಿ ಆಗಿ ಹೋದ ಪ್ರಯೋಗಗಳ ಬಗ್ಗೆ ಪಾಟೀಲರು ಸಿದ್ಧಪ್ಪನಿಗೆ ಈ ರೀತಿಯಾಗಿ ವಿವರಿಸುತ್ತಾರೆ. " ನಮ್ಮ ಪಾಲಿಗೆ ಭೂಮಿ ಹಾಳಾಗುತ್ತದೆಯೋ ವಿನಾ ಅದರ ಪಾಲಿಗೆ ಅಲ್ಲ. ಈಗಾಗಲೇ ಪ್ರಕೃತಿ ಎಷ್ಟೊಂದು ಪ್ರಯೋಗ ಮಾಡಿದೆ. ಎಷ್ಟೊಂದು ತರತರದ ಪ್ರಾಣಿಗಳು ಸಸ್ಯ ಸಮೂಹಗಳು ಈ ಭೂಮಂಡಲದ ಮೇಲೆ ಆಗಿ ಹೋದವು. ನಿನಗೆ ತಿಳಿದಂತೆ ಒಂದು ಕಾಲಕ್ಕೆ ಜಲಚರಗಳು, ಸರೀಸೃಪಗಳು, ಸಸ್ತನಿಗಳು. ನಾವು ಇಲ್ಲಿ ಬದುಕೋಕೆ ನಾಲಾಯಖ್ ಅಂತನ್ನಿಸಿದರೆ ನಾವು ಇಲ್ಲಿಂದ ನಿರ್ಗಮಿಸ್ತೀವಿ. ನಾಮಾವಶೇಷ ಆಗ್ತಿವಿ. ಆದರೆ ನಿಧಾನವಾಗಿ ಪ್ರಕೃತಿ ಇನ್ನೊಂದು ತರದ ಪ್ರಯೋಗಕ್ಕೆ ಕೈ ಹಾಕ್ತದೆ. ಮತ್ತೆ ಭೂಮಂಡಲದ ಸ್ಮಶಾನದಿಂದ್ಲೇ ಇನ್ನೇನೋ ಒಂದು ಚೈತನ್ಯ ಚಿಮ್ಮುತ್ತೆ ಅಷ್ಟೆ".[೬]

ಇಲ್ಲಿ ಕೆಸರೂರು ಹೈಬ್ರಿಡನ್ನು ತೋರಿಸಲು ಅವರು ತಮ್ಮ ಸಹಾಯಕರನ್ನು ಕಾಡಿಗೆ ಕರೆದುಕೊಂಡು ಹೋಗಲು ನಿಶ್ಚಯಿಸುತ್ತಾರೆ. " ಕತೆ ಕಟ್ಟಿಕೊಂಡು ಅದಕ್ಕೆ ಸಾಕ್ಷ್ಯಾಧಾರ ಹುಡುಕ್ತಾ ಚಿದಂಬರ ರಹಸ್ಯ ಭೇದಿಸೋದಕ್ಕೆ ಹೋಗ್ತಿದೀರಾ. ನೆನಪಿರ್ಲಿ ನಿಮಗೆ ಸಿಕ್ಕೊ ಸಾಕ್ಷ್ಯಾಧಾರಗಳೇ ಬೇರೆಯೋರಿಗೆ ಬೇರೆ ಕತೆಗಳಿಗೆ ಸಾಕ್ಷ್ಯಾಧಾರ ಆಗಿರ್ತವೆ. ಅತಿಬುದ್ಧಿಯ ಅವಿವೇಕ ಮಾಡ್ತಿದ್ದೀರಾ. ನನ್ನ ಹತ್ರ ಕಾಲು ಉಳುಕಿದರೂ ಗಾಳಿ ತಾಗಿದೆ, ಭೀತಿ ಮೆಟ್ಕೊಂಡಿದೆ, ಅಂತ ಬರ್ತಾರೆ. ಅವ್ರೊಂದು ತರದ ಅಜ್ಞಾನದ ಅವಿವೇಕಿಗಳಾದರೂ ನೀವಿನ್ನೊಂದು ತರದೋರು"[೭] ಎಂದು ಬಯ್ದರೂ ಅಂಗಾಡಿ ಮತ್ತಿತರರ ಚಟುವಟಿಕೆಗಳಲ್ಲಿ ಸಕ್ರಿಯವಾಗಿ ಪಾಲುಗೊಳ್ಳುತ್ತಾರೆ. ಇದು ಈ ಕಾದಂಬರಿಯ ವಿಶಿಷ್ಟ ಅಂಶ. ಇದು ಪಾಟೀಲರಿಗೆ ಮಾತ್ರ ಅನ್ವಯಿಸದೆ, ಕಾದಂಬರಿಯ ಎಲ್ಲ ಮುಖ್ಯ ಪಾತ್ರಗಳಿಗೂ ಅನ್ವಯಿಸುತ್ತದೆ. ಕಾದಂಬರಿಯಲ್ಲಿ ಬರುವ ಅಂಗಾಡಿ, ರಾಮಚಂದ್ರ, ಜಯರಾಮ ಇವರೆಲ್ಲಾ ತಮ್ಮ ವಿಚಾರಗಳಿಂದ ಚರ್ಚೆಯ ಕ್ರಿಯೆಯಲ್ಲಿ

ಸಿಕ್ಕಿ ನಂತರ ಹೊರಬರುತ್ತಾರೆ. ಹಾಗೆಯೇ ಕ್ರಾಂತಿಕಾರಿ ಹುಡುಗರೂ ಕೂಡ ನಂತರ ಕ್ರಿಯಾಶೀಲರಾಗುತ್ತಾರೆ.

ಧರ್ಮಾಂಧರ ಮತೀಯ ರಾಜಕೀಯ, ಹುಡುಗರ ಕ್ರಾಂತಿಕಾರಕ ಭ್ರಮೆ, ರಫಿ-ಜಯಂತಿಯ ಪ್ರೇಮ, ಗೋಸಾಯಿಗಳ ಅನುದ್ದೇಶಿತ ಬದುಕು, ಕಪ್ಪು ವ್ಯವಹಾರಗಳು, ಹಾಗೆಯೇ ಜೋಗಿಹಾಳರ ಸಾವು, ಮಾನವ ಮತ್ತು ಪ್ರಜ್ಞೆ, ಏಲಕ್ಕಿಯ ರೋಗ, ಸಮಾಜದ ಸಾಂಸ್ಕೃತಿಕ ಅವನತಿ ಮುಂತಾದ ಚಿತ್ರಗಳು ವಾಸ್ತವ ಬದುಕಿನೊಂದಿಗೆ ಬೆಸೆದುಕೊಂಡಿರುವುದನ್ನು ಗುರುತಿಸಬಹುದು. ಜೋಗಿಹಾಳರ ಸಾವು ಅಪಘಾತವೋ, ಸಹಜವೊ, ಕೊಲೆಯೊ ಎಂಬ ಪ್ರಶ್ನೆ ಮೂಡಿದರೆ, ಜೋಗಿಹಾಳರ ಸಹೋದ್ಯೋಗಿಗಳೆಲ್ಲ ಹೆದರುವ ಪರಿಸ್ಥಿತಿ, ಜೋಗಿಹಾಳರ ಸಾವನ್ನೆ ತಾರ್ತಿಕವಾಗಿ ತನ್ಮೂಲಕ ಕೆಸರೂರಿನ ಅವನತಿಗೆ ಕಾರಣ ಕಂಡು ಹಿಡಿಯಬಹುದು ಎಂಬ ವಿಚಾರದಿಂದ ಪ್ರಶ್ನಿಸತೊಡಗುತ್ತಾರೆ. ಜೋಗಿಹಾಳರ ಸಾವು ಅಂತರರಾಷ್ಟ್ರೀಯ ಪಿತೂರಿಯೆಂದು, ಅದಕ್ಕೆ ಗ್ವಾಟೆ ಮಾಲದ ವಿದೇಶಿ ಏಜಂಟರು, ಕೆಸರೂರಿನ ಗೋಸಾಯಿಗಳ ಸಹಾಯ ಇದೆಯೆಂದು ಇವೆಲ್ಲದರ ಮೇಲೆ ಕಥೆ ಕಟ್ಟಿ, ವರ್ತಮಾನದಲ್ಲಿ ಪಾಟೀಲರ ಸಾವು ಕೂಡ ಆಗುತ್ತದೆ ಎಂದು ಜಯರಾಂ ತಿಳಿಸುತ್ತಾನೆ.

ಜಯರಾಂನಿಗೆ ಈ ಕಥೆಯ ಮೂಲಕ ತಿಳಿದುಕೊಳ್ಳಬೇಕಾದ್ದು ಪ್ರಜ್ಞೆ ಸ್ವತಂತ್ರವೋ ಅಥವಾ ನಿಯಮಗಳಿಗೆ ಬದ್ಧವೋ? ಎಂಬುವುದಾಗಿದೆ. ಅಂಗಾಡಿ, ಜಯರಾಂ ರಿಗೆ ಜೋಗಿಹಾಳರ ಕಲ್ಪನೆಯ ಸಾವಿನ ಕಥೆಗೆ ಸಾಕ್ಷಿ ಬೇಕಾದರೆ ಯುಸೂಫ್ ಬೇರಿಗೆ ಅಂಗಾಡಿ ಎಂಬುವನು ಪತ್ತೇದಾರನೆಂದು, ಆತ ತನ್ನ ಕಳ್ಳ ವ್ಯವಹಾರಗಳನ್ನು ಬಯಲು ಮಾಡಲು ಬಂದವನೆಂಬ ತರ್ಕಕ್ಕೆ ಸಾಕ್ಷಿ ಬೇಕಾಗಿರುತ್ತದೆ. ಈ ಉದ್ದೇಶದಿಂದಲೇ ಆತ ಬ್ರಿಡರ್‌ಮಹಮ್ಮದನ್ನು ಹೆದರಿಸಿ ಕೊಲೆ ಬೆದರಿಕೆ ಹಾಕಿದ್ದು, ಎಂಬ ಅರಿವು ನಮಗೆ ಉಂಟಾಗುತ್ತದೆ.

ಕೆಸರೂರಿನಲ್ಲಿ ಸ್ವಾಭಾವಿಕತೆಗೆ ಸ್ಥಾನವೇ ಇಲ್ಲ. ವಾಸ್ತವ ಎನ್ನುವುದು ಭ್ರಮೆ ಅಷ್ಟೆ. ಆದುದರಿಂದಲೇ ಮನುಷ್ಯನ ಜೀವಿತಾವಧಿಯ, ಭೌತಿಕ ದರ್ಶನದ ಮಿತಿಯಲ್ಲಿರುವ ಈ ವಾಸ್ತವವನ್ನು ಅಸ್ಥಿರ ಎಂದು ಪರಿಗಣಿಸಬೇಕಾಗುತ್ತದೆ. ಈ ಅಸ್ಥಿರವಾದದ ಪ್ರಮುಖ ಅಂಗಗಳಾದ ಸಮಾಜ ಮತ್ತು ಅದರ ಕ್ರಿಯೆ ಪ್ರಕ್ರಿಯೆಗಳ ಫಲಿತವಾದ ಘಟನೆಗಳ ಸಂಬಂಧವನ್ನು ನೋಡಿದಾಗ ವ್ಯಕ್ತಿಗಳ ವಿಚಾರ ಮತ್ತು ಕ್ರಿಯೆಗಳ ಮಧ್ಯೆ ಅಂತರ ಜಾಸ್ತಿ ಆಗಿರುವುದರಿಂದಲೇ, ಜನರ ನಡುವೆ ಸಂವಹನವಾಗಲಿಲ್ಲ. ಒಂದೊಂದು ಘಟನೆಯೂ ಪ್ರತಿಯೊಬ್ಬರಿಗೂ ತಮ್ಮ ವಿರೋಧಿಗಳ ಪೂರ್ವ ನಿಯೋಜಿತವಾಗಿ ಗೋಚರಿಸುತ್ತದೆ. ಕೃಷ್ಣಪ್ಪಗೌಡನ ಮನೆಗೆ ಕಲ್ಲು ಬೀಳುವ ರಹಸ್ಯ, ಸ್ವತಃ ಅಂಗಾಡಿಯೇ

ಸುಲೇಮಾನ್ ಬೇರಿಗೆ ರಹಸ್ಯ ಹಾಗೆಯೇ ಕ್ರಾಂತಿಕಾರಿ ಹುಡುಗರಿಗೆ ಹುಡುಗಿಯರೇ ರಹಸ್ಯವಾಗಿ ಕಾಣುತ್ತಾರೆ.

ಲೇಖಕರು ಇಲ್ಲಿ ಅಂಧಕಾರದ ಬದುಕಿನಲ್ಲಿ ಹೊಸ ಸಾಧ್ಯತೆಗಳಿಗೆ ಅವಕಾಶವನ್ನು ಕಲ್ಪಿಸುತ್ತಾರೆ. ಉದಾ: ಜಯಂತಿಯಲ್ಲಿ ಪೂರ್ವದ ಘಟನೆಗಳ ಬಗ್ಗೆ ಹೊಸ ಹುಮ್ಮಸ್ಸು ಮೂಡಿ ಬರುತ್ತದೆ. ಅದು ಕೆಸರೂರಿನ ಮನೆ ಇರಬಹುದು. ಅಥವಾ ಮನೆಯೊಳಗಿನ ತುಮುಲ ಇರಬಹುದು. ( ಪು.ಸಂ.೨೧೨-೨೧೩ ರಲ್ಲಿ) ಅವನ ನಗು ಇದೊಂದು ವಿಚಿತ್ರ ದರ್ಶನದಂತೆ ಭಾಸವಾಯ್ತು ಅವಳಿಗೆ.............ಜಯಂತಿ ಗಿರ್ರನೆ ತಿರುಗುವ ಅಗ್ನಿಗೋಲವಾದಳು. ಮನಸ್ಸಿನ ಉನ್ಮತ್ತದಿಂದ ಜಾತಿ, ಮನೆತನ, ಕುಟುಂಬ ಹೆಸರುಗಳೆಲ್ಲ ಕಳಚಿ ಹೋಗುತ್ತದೆ. ಇಲ್ಲಿ ಜಯಂತಿಗೆ ಸ್ಥಾಪಿತ ಬದುಕಿನ ನಿರ್ದಿಷ್ಟ ನಡವಳಿಕೆಯ ಅರಿವು ಉಂಟಾಗುತ್ತದೆ. ಡಾಂಬರ ಯಂತ್ರದ ಸಿಡಿತದ ಸಾವಿನಿಂದ ಉಂಟಾಗ ಬಹುದಾಗಿದ್ದ ದರ್ಶನವನ್ನು ಸಮಾಜ ಅರ್ಥ ಮಾಡಿಕೊಳ್ಳುವುದಿಲ್ಲ. ಜಯಂತಿಯು ಹೇಳುವಂತೆ " ನಮಗೆ ಕಾಣ್ತಿದೆ, ಅವರಿಗೆ ಕಾಣ್ತಿದ್ಯ ಈ ಹೊಗೇಲಿ"[೮] ಎಂದು ಕೆಸರೂರಿನ ಸಮಾಜಕ್ಕೆ ಅಂಟಿಕೊಂಡ ಒತ್ತಡಗಳು, ಸ್ವಾರ್ಥತೆ, ಅಸೂಯೆ, ಸಾವು ಧರ್ಮಾಂಧತೆ, ವಂಚನೆ ಮುಂತಾದುವುಗಳನ್ನು ' ಹೊಗೆಯಲ್ಲಿ' ಸತ್ಯದರ್ಶನವಾಗುವುದಿಲ್ಲ ಎಂದು ತಿಳಿದು ಇಡೀ ಸಮಾಜಕ್ಕೆ ಅಥವಾ ರಾಷ್ಟ್ರಕ್ಕೆ ಮಾದರಿ ಆಗುತ್ತಾಳೆ.

ಕಾದಂಬರಿಯಲ್ಲಿ ಮತಾಂಧ ಶಕ್ತಿಗಳ ಕುತಂತ್ರಗಳಿಗೆ ಸಿಕ್ಕಿ ಸರ್ವನಾಶವಾದ ಊರಿನಲ್ಲಿ ಬದುಕಿ ಉಳಿಯುವವರು ಜಾತ್ಯಾತೀತ ರಫಿ ಮತ್ತು ಜಯಂತಿ ಮಾತ್ರ. ಜಾತಿಯನ್ನು ಮೀರದೆ ಹೋದರೆ, ಮತೀಯ ಅಂಧತ್ವ ಭಾರತದಂತಹ ರಾಷ್ಟ್ರಗಳ ಮನಸ್ಥಿತಿಯಲ್ಲಿ ಗಾಢವಾದರೆ ಅದರ ಪರಿಣಾಮ ಏನಾಗಬಹುದು ಎಂಬುವುದನ್ನು ಈ ಕಾದಂಬರಿ ಆಳವಾಗಿ ಚಿಂತಿಸುತ್ತದೆ. ಅಂದರೆ ಕೆಸರೂರಿನ ಏಲಕ್ಕಿಗೆ ಅಂಟಿದ ಕಾಯಿಲೆಗೆ ಹೇಗೆ ಔಷಧಿಯಿಲ್ಲವೋ ಹಾಗೆಯೇ ಇಲ್ಲಿನ ಬದುಕಿಗೆ ಅಂಟಿದ ಮೂಲಭೂತವಾದಿ ಕೃತ್ಯಗಳಿಗೂ ಸುಲಭದ ಪರಿಹಾರವಿಲ್ಲ ಎನ್ನುವುದು ಕಾದಂಬರಿಯಿಂದ ನಮಗೆ ತಿಳಿಯುತ್ತದೆ.

ಇಲ್ಲಿ ಬರುವ ಕೆಸರೂರಿನ ಹೆಸರೇ ಒಂದು ರೀತಿಯಲ್ಲಿ ಸಂಕೇತವಾಗಿದೆ. ಇಲ್ಲಿನ ಎಲ್ಲಾ ಬಗೆಯ ಚಟುವಟಿಕೆಗಳು ಕ್ರಿಯೆಗಳು ಕೇವಲ ಯಾವುದೇ ಒಂದು ಸೀಮಿತ ಪ್ರದೇಶಕ್ಕೆ ಮಾತ್ರ ಸಂಬಂಧಿಸಿದವುಗಳಾಗಿ ಕಾಣುವುದಿಲ್ಲ. ಇಲ್ಲಿ ಇಡೀ ರಾಷ್ಟ್ರ ಕೆಸರೂರಾಗಿಯೂ, ಕೆಸರೂರಿನ ಕಾಯಿಲೆಗೆ ಇಡೀ ಒಂದು ಜನಪದವೇ ಸಿಕ್ಕಿದ್ದನ್ನು ಗುರುತಿಸಬಹುದು. ಇಡೀ ಕಾದಂಬರಿಯ ಉದ್ದಕ್ಕೂ ರಾಜಕಾರಣದ ಕೊಳಕುತನಗಳನ್ನು ಧಾರ್ಮಿಕ ಮತಾಂತರ, ಮೂಲಭೂತವಾದಿ ಕೃತ್ಯಗಳನ್ನು ನಿರರ್ಥಕ ಸಂಶೋಧನೆ ಮತ್ತು ಭ್ರಮೆಗಳಲ್ಲಿ ಬದುಕನ್ನು ನಡೆಸುತ್ತಿರುವ ವಿಚಾರವಾದಿ ಧೋರಣೆಗಳನ್ನು ಲೇಖಕರು ವ್ಯಂಗ್ಯಕ್ಕೆ ಗುರಿಪಡಿಸುತ್ತಾರೆ.

ಹುಸಿ ಕ್ರಾಂತಿಯ ಬೀಜಗಳು ಸಾಮಾಜಿಕ ಬದಲಾವಣೆಯ ಸಂದರ್ಭದಲ್ಲಿ ಭ್ರಷ್ಟವಾಗುವುದನ್ನು ಅವಕಾಶವಾದಿ ರಾಜಕಾರಣದ ನೆಲೆಯಲ್ಲಿ ಅವಸಾನವಾಗುವುದನ್ನು ತೇಜಸ್ವಿ ಗುರುತಿಸುತ್ತಾರೆ. ಈ ಕಾದಂಬರಿಯ ಅರ್ಥಶಾಸ್ತ್ರ ಪ್ರಾಧ್ಯಾಪಕ ತುಮಕೂರಿನ ಟಿ.ಆರ್. ರಾಮಚಂದ್ರ ಮತ್ತು ಕ್ರಾಂತಿಯ ಭ್ರಮೆಯಲ್ಲಿ ತೇಲಾಡುವ ಅನುಯಾಯಿಗಳ ನಿರರ್ಥಕತೆಯಲ್ಲಿ ತೇಜಸ್ವಿಯವರ ಈ ಕೆಳಗಿನ ಘೋಷಿತ ನಿಲುವುಗಳು ಪ್ರಯೋಗಶೀಲತೆಗೆ ಒಳಪಡುತ್ತದೆ.

೧) " ಸಮಾಜವಾದಿ ಘೋಷಣೆ ಕೂಗಿ ನಾವು ಮಾಡಿದಂತೆ ನೀವು ಮಾಡಬೇಡಿ".[೯] ( ಉದಯವಾಣಿ ವಿಶೇಷ ಸಂಚಿಕೆ ೨೦೦೦)

೨) " ನಾವು ಪೂಲ್ಸ್ ಆದಂತೆ ನೀವು ಆಗಬೇಡಿ".[೧೦]

( ಆಕೃತಿ೨೫ ಡಿಸೆಂಬರ್೨೦೦೦) ಮೀಸಲಾತಿ ಪ್ರಶ್ನೆಗಳು.

ಕೆಲವು ಆದರ್ಶ ಮೌಲ್ಯಗಳ ಬೆನ್ನು ಹತ್ತಿದ ಸಂವೇದನೆಗೆ ಜಾಗತೀಕರಣದಿಂದಾಗಿ ಆ ಎಲ್ಲ ಮೌಲ್ಯಗಳು ನಿರರ್ಥಕವೆನಿಸಿದ ಸಂದರ್ಭವಿದು. ಈ ಸಂದರ್ಭದಲ್ಲಿ ಸಮಾಜವಾದ ಗಾಂಧೀವಾದಗಳ ವಿರುದ್ಧ ದಿಕ್ಕಿನಲ್ಲಿ ಚರಿತ್ರೆ ಮುಖ ಮಾಡಿರುವುದರಿಂದ ಹೊಸ ಮೌಲ್ಯಗಳ ಹುಡುಕಾಟಕ್ಕೆ ತೇಜಸ್ವಿ ತೊಡಗುತ್ತಾರೆ. ಮನುಷ್ಯನ ಧಾರ್ಮಿಕ ಮತಾಂಧತೆ, ಹಣದ ಬಗೆಗಿನ ವ್ಯಾಮೋಹಗಳು ಸಮಷ್ಟಿ ಬದುಕನ್ನೇ ಲಂಟಾನಾ ರಾಕ್ಷಸನ ಬಾಯಿಗೆ-ಬೆಂಕಿಗೆ ಆಹುತಿ ಮಾಡುವ ದುರಂತವನ್ನು ಈ ಕೃತಿಯಲ್ಲಿ ಗುರುತಿಸುತ್ತೇವೆ. ಕಾಳದಂಧೆಗಳಿಗೆ ಸರ್ಕಾರ, ಕಾನೂನು ಮತ್ತು ನ್ಯಾಯಾಲಯಗಳ ಸಮ್ಮತಿ ಮತ್ತು ಪರವಾನಗಿಗಳನ್ನು ಗಿಟ್ಟಿಸಿಕೊಂಡು ನಡೆಸುತ್ತಿರುವ ಹಗಲು ದರೋಡೆಗಳಿಂದ ಇಡೀ ಸಂಸ್ಕೃತಿಯನ್ನು ಒಂದಲ್ಲಾ ಒಂದು ದಿನ ದುರಂತಕ್ಕೆ ಒಡ್ಡುವ ಭೀಕರ ಚಿತ್ರಗಳನ್ನು ಈ ಕಾದಂಬರಿಯು ಚಿತ್ರಿಸುತ್ತದೆ. ಒಂದು ಸಮುದಾಯದ ಅವನತಿಯನ್ನು ಅಲ್ಲಿನ ಸ್ವಾರ್ಥಪೂರಿತ ಪ್ರತಿಷ್ಠಿತ ವ್ಯಕ್ತಿಗಳ ಆದರ್ಶಗಳಿದ್ದೂ ಕೆಲಸ ಮಾಡಲು ಅವಕಾಶ ಹೊಂದಿದ್ದು, ಸಮರ್ಥ ಅಧಿಕಾರಿಗಳು ಹಾಗೂ ಗೋಸಾಯಿಗಳ, ಮೇಜಿಷಿಯನ್‌ಮುತ್ತು ಮತ್ತು ಅಂತಹ ಹಲವಾರು ಜನಗಳ ಪಿತೂರಿಯ ಬಾಕಿ ಕಣ್ಣು, ಕಿವಿಗಳಾದ ವಿವೇಚನಾರಹಿತ ರೀತಿ-ನೀತಿಯ ಜನಗಳು ತಂದೊಡ್ಡಬಲ್ಲರು ಎನ್ನುವುದನ್ನು ಚಿದಂಬರ ರಹಸ್ಯ ಬಿಚ್ಚಿ ತೋರಿಸುತ್ತದೆ. ಸ್ವಾತಂತ್ರ್ಯ ಬಂದ ನಂತರದ ನಲವತ್ತು ವರ್ಷಗಳಲ್ಲಿ ನಮ್ಮ ಸಮಾಜ ಪಡೆದಿರುವ ವಿಕೃತ ತಿರುವುಗಳಿಗೆ, ಸಂಕೀರ್ಣ ಬೆಳವಣಿಗೆಗೆ ಕನ್ನಡಿ ಹಿಡಿಯುವುದರಲ್ಲಿ ಚಿದಂಬರ ರಹಸ್ಯ ಯಶಸ್ವಿಯಾಗಿದೆ.

## ೩.೨. ಜುಗಾರಿಕ್ರಾಸ್ ಮತ್ತು ಸಾಮಾಜಿಕ ಪ್ರಜ್ಞೆ

ಕೆ.ಪಿ. ಪೂರ್ಣಚಂದ್ರ ತೇಜಸ್ವಿಯವರ 'ಜುಗಾರಿಕ್ರಾಸ್' ಕಾದಂಬರಿಯು ೧೯೯೪ಳ ರಲ್ಲಿ ರಚಿತವಾಗಿದೆ. ಸಹ್ಯಾದ್ರಿಯ ಕಾಡುಗಳ ತಪ್ಪಲಿನಲ್ಲಿ ನಡೆಯುತ್ತಿದ್ದ, ವಾಸ್ತವ ಚಿತ್ರಣವಿರುವ ಈ ಕಾದಂಬರಿಯು ೨೪ ಗಂಟೆಗಳ ಸಣ್ಣಕಥೆ. ತೇಜಸ್ವಿಯವರು ಹೇಳಿರುವಂತೆ ಈ ಕಾದಂಬರಿಯು ಸಹ್ಯಾದ್ರಿಯ ಸಾಮಾಜಿಕ ಸ್ಥಿತ್ಯಂತರಗಳನ್ನು ಒಂದೇ ಮಿಂಚಿನಲ್ಲಿ ತೋರಿಸುತ್ತದೆ. ಮಲೆನಾಡಿನ ದಟ್ಟ ಕಾಡಿನ ನಡುವೆ ನಾಲ್ಕಾರು ದಾರಿ ಕೂಡುವ ಒಂದು ವೃತ್ತವನ್ನು ' ಜುಗಾರಿ ಕ್ರಾಸ್' ಎಂದು ಕರೆಯಲಾಗಿದೆ. ಸುತ್ತಮುತ್ತಲಿನ ದೇವಪುರ, ಮೇದರಹಳ್ಳಿ, ಮೊದಲಾದ ಊರುಗಳು ಒಂದು ಸಂದರ್ಭದಲ್ಲಿ ನೆಮ್ಮದಿಯಿಂದ ಕೂಡಿತ್ತು. ಆಧುನೀಕರಣಕ್ಕೆ ಒಳಗಾಗಿ ' ಜುಗಾರಿ ಕ್ರಾಸ್' ಅನೇಕ ಕಾರಣಗಳಿಂದ ಬದಲಾವಣೆಯನ್ನು ಉಂಟು ಮಾಡಿದೆ.

ಕುವೆಂಪುರವರ ಕಾನೂರುಹೆಗ್ಗಡತಿ, ಕಾರಂತರ ಮರಳಿಮಣ್ಣಿಗೆ ಕಾಲದ ಸಹ್ಯಾದ್ರಿಯ ಕಾಡುಗಳಿಗೂ, ಇವತ್ತಿನ ಪರಿಸ್ಥಿತಿಗೂ ಇರುವ ಬದಲಾವಣೆಗೆ ಈ ಕಾದಂಬರಿ ಉತ್ತಮ ಉದಾಹರಣೆ ಆಗಿದೆ. ಈ ಸಹ್ಯಾದ್ರಿಯಲ್ಲಿ ಕಲ್ಲು ಕಳ್ಳರಿಗೆ, ಮರಗಳ್ಳರಿಗೆ, ಗಂಧ, ಚಕ್ಕೆ ಕಳ್ಳ ಸಾಗಾಣಿಕೆ ಮಾಡುವ ಖದೀಮರಿಗೆ ಅನುಕೂಲವಾಗಿದೆ. ಕಾಡು ಎಂಬುವುದು ಅದು ಕಾಳದಂಧೆಗಳ ತವರು ಮನೆ ಆಗುತ್ತದೆ. ಇಲ್ಲಿ ಉತ್ಪತ್ತಿ ಆಗುವ ಕಾಳಧನ ನಮ್ಮ ದೇಶದ ಅತ್ಯುನ್ನತ ರಾಜಕೀಯವನ್ನು ಕೂಡ ನಿಯಂತ್ರಿಸುತ್ತದೆ ಎಂದು ತೇಜಸ್ವಿಯವರೇ ತಿಳಿಯಪಡಿಸುತ್ತಾರೆ. ಕಾಳ ವ್ಯವಹಾರಗಳ ವಿಷವೃತ್ತ ಈ ಮಟ್ಟ ತಲುಪಿದ ಮೇಲೆ ನ್ಯಾಯಾಲಯಗಳು ಇದನ್ನು ಪ್ರತಿರೋಧಿಸಲಾರವು. ಇಲ್ಲಿ ಮನುಷ್ಯ ಸಮಾಜ ಇಡೀ ವಿಶ್ವ ವ್ಯವಸ್ಥೆಯೊಂದಿಗೆ ಹೊಳಪು ಹಾಕಿಕೊಂಡಿಲ್ಲ.

ತೇಜಸ್ವಿಯವರು ಜಗತ್ತನ್ನುಪರಿಭಾವಿಸುವ ನೋಟವನ್ನು ಈ ಕಾದಂಬರಿಯಲ್ಲಿ ಅಡಕಗೊಳಿಸಿದ್ದಾರೆ. ಮಾನವನ ವಾಸ್ತವ ಬದುಕಿನಲ್ಲಿ ಅನೇಕ ರೀತಿಯ ಪಾತ್ರಗಳು, ಸನ್ನಿವೇಶಗಳು, ಸಂದರ್ಭಗಳು ಆಗಿ ಹೋಗುತ್ತವೆ. ಇಂತಹ ಸನ್ನಿವೇಶಗಳು, ಸಂದರ್ಭಗಳು ಮಾನವನ ಊಹೆಗೂ ನಿಲುಕದೆ, ತರ್ಕಕ್ಕೂ ಸಿಗದೆ ಕೆಲವು ಅದೃಶ್ಯ ವ್ಯಕ್ತಿಗಳ ಮೂಲಕ ನಡೆಯುತ್ತದೆ. ಇವೆಲ್ಲವನ್ನು ನಿಯಂತ್ರಿಸುವ ಒಬ್ಬ ಮುಖಂಡನು ಇರುತ್ತಾನೆ. ಇವೆಲ್ಲವನ್ನು ಜನಸಾಮಾನ್ಯರು ಕಂಡೂ, ಕಂಡರಿಯದ ಮಟ್ಟಕ್ಕೆ ಇಳಿದು ಬಿಟ್ಟಿದ್ದಾರೆ. ಇದು ಕೇವಲ ಜುಗಾರಿಕ್ರಾಸ್‌ನ ಕಥೆಯಾಗಿ ಮೂಡಿ ಬಂದಿಲ್ಲ. ವಿಶ್ವ ಜಗತ್ತಿನ, ವ್ಯಾಪಕ ದೃಷ್ಟಿಕೋನವನ್ನು, ವಾಸ್ತವತೆಯನ್ನು ಜನರ ಕಣ್ಣಿಗೆ ಕಟ್ಟಿ ಕೊಡುತ್ತಾರೆ.

ತೇಜಸ್ವಿಯವರ ' ನಿಗೂಢ ಮನುಷ್ಯರು' ನಿಂದ ' ಚಿದಂಬರ ರಹಸ್ಯ' ವರೆಗೆ ಒಂದು ರೀತಿಯ ಪತ್ತೇದಾರಿಕೆ ಕಂಡುಬರುತ್ತದೆ. ' ಜುಗಾರಿ ಕ್ರಾಸ್' ಕಾದಂಬರಿಯಲ್ಲಿ ಈ ರೀತಿಯ ಪತ್ತೇದಾರಿಕೆ ಒಂದು ನಿಶ್ಚಿತ ಪ್ರಕರಣದ, ನಿಶ್ಚಿತ ಪರಿಮಿತ ಶೋಧ ಎಂಬುವುದು ಪ್ರಬಂಧದ ಧ್ವನಿ ಆಗಿದೆ.

' ಜುಗಾರಿಕ್ರಾಸ್' ಮನುಷ್ಯರಿಂದಲೇ ತುಂಬಿದ ಪ್ರಪಂಚವಾದರೂ ಅದನ್ನು ಗ್ರಹಿಸುವ ಬಗೆಯಲ್ಲಿ ಬೆರಗು, ಕುತೂಹಲ, ವಿಸ್ಮಯವನ್ನು ಉಂಟು ಮಾಡುತ್ತದೆ.

' ಜುಗಾರಿಕ್ರಾಸ್' ಕಾದಂಬರಿಯಲ್ಲಿ ವಿದ್ಯಮಾನಗಳ ಬಗ್ಗೆ ವೈಚಾರಿಕ, ಸಾಮಾಜಿಕ, ರಾಜಕೀಯ, ವಿಶ್ಲೇಷಣೆ ಮಾಡುವುದು ಮಾತ್ರ ಉದ್ದೇಶ ಅಲ್ಲ. ಈ ಲೋಕದ ನ್ಯಾಯ-ಅನ್ಯಾಯ, ಸತ್ಯ- ಅಸತ್ಯವನ್ನು ಜ್ಞಾನ-ಅಜ್ಞಾನ ಮುಂತಾದ ವಿಷಯಗಳನ್ನು ತಿಳಿಯಬೇಕು. ಇದು ಕೇವಲ ಸಂತ, ಋಷಿ, ಪ್ರವಾದಿಗಳಿಂದ ಅಲ್ಲ. ಬದಲಾಗಿ ವಿಜ್ಞಾನದಿಂದ, ವಿಜ್ಞಾನಿಗಳಿಂದ ತಿಳಿಯಬೇಕು ಎಂಬುವುದು ತೇಜಸ್ವಿಯವರ ನಿಲುವು. ಅಲ್ಲದೆ ವಾಸ್ತವ ಬದುಕಿನ ಚಿತ್ರಣವನ್ನು ಕೂಡ ಕಟ್ಟಿಕೊಡುತ್ತದೆ. ಮಾನವನ ನಾಗರಿಕತೆಯಲ್ಲಿ ಅವನ ಕ್ರಿಯಾಶೀಲತೆಯನ್ನು ಮೆಚ್ಚಿದರೂ ಕೂಡ ಅವನ ಕಾನೂನು ಬಾಹಿರ ಚಟುವಟಿಕೆಗಳನ್ನು ಯಾವ ಹಿಂಜರಿಕೆಯೂ ಇಲ್ಲದೆ ದಾಖಲಿಸುತ್ತಾರೆ. ಕಾದಂಬರಿಯನ್ನು ಪತ್ತೇದಾರಿ ಅಥವಾ ವಾಸ್ತವವಾದೀ ನೆಲೆಯಿಂದ ಅಧ್ಯಯನ ಮಾಡಿದರೆ, ಅದರಿಂದ ನಮಗೆ ಯಾವುದೇ ರೀತಿಯ ದಾಖಲೆಯನ್ನು ಪಡೆಯಲು ಸಾಧ್ಯವಿಲ್ಲ.

ಜುಗಾರಿಕ್ರಾಸ್‌ನ ಕಾಳದಂಧೆಗಳು ಬೃಹತ್ ಕಥನದ ರೂಪದಲ್ಲಿ ಸಾಗಿ ಬಂದಿದೆ. ತಮ್ಮ ವ್ಯವಹಾರಗಳಲ್ಲಿ ಹೇಗಾದರೂ ದುಡ್ಡು ಮಾಡುವುದೇ ಮುಖ್ಯ ವಿಷಯವಾಗಿ ಮೂಡಿ ಬರುತ್ತಿದೆ. ಸುರೇಶ-ಗೌರಿಯರ ಸಾಹಸದ ಕ್ಷಣಗಳನ್ನು ತೇಜಸ್ವಿಯವರು ತುಂಬಾ ಲವಲವಿಕೆಯ ಧಾಟಿಯಲ್ಲಿ ಚಿತ್ರಿಸುತ್ತಾರೆ. ಗೌರಿ ಹೇಳುತ್ತಾಳೆ. " ಇಲ್ಲೀವರೆಗೂ ಸಿಕ್ಕಿದ ದುಡ್ಡಿಗೆಲ್ಲಾ ನಾವು ಕೊಂಡು ಕೊಂಡಿರೋದು ಗಂಡಾಂತರಗಳನ್ನೇ ಅಲ್ಲವೆ. ಕೆಂಪು ಕಲ್ಲು ಸಿಕ್ಕು ನಾವು ದುಡ್ಡು ಮಾಡಿದರೂ ಅದರಿಂದ ನಮಗೆ ನೆಮ್ಮದಿ ಸಿಗುತ್ತೆ ಅಂತ ನಾನಂತೂ ತಿಳಿದಿಲ್ಲ. ನೀವು ನನಗೆ ದುಡ್ಡಿನ ಆಸೆಯೋ ಅಥವಾ ಕೆಂಪು ವಜ್ರಗಳ ಆಸೆಯೋ ಇರುವುದರಿಂದ ಹೀಗೆ ಮಾತನಾಡುತ್ತಿದ್ದೇನೆ, ಅಂತ ಖಂಡಿತಾ ತಿಳಿಬೇಡಿ. ಇಷ್ಟು ದಿನದ ನಮ್ಮ ಹಣೆಬರಹ ನೋಡಿದರೆ, ಈ ತರಹ ಹಗರಣಗಳಲ್ಲೇ ಬದುಕೋದು ನಮ್ಮ ರಕ್ತಕ್ಕೆ ಇಳಿದಿರೋ ಹಾಗೆ ಕಾಣ್ತದೆ. ಇಲ್ಲೀವರೆಗೆ ಬದಲಾಗದೇ ಇರೋ ನಮ್ಮ ಗ್ರಹಗತಿ ಈಗ ಫಕ್ಕನೆ ದಿಕ್ಕು ಬದಲಾಯಿಸುತ್ತ? ಇಷ್ಟೆಲ್ಲಾ ಅನುಭವಿಸಿ ಈಗ ನಮ್ಮಪಾಡಿಗೆ ನಾವು ಎಲ್ಲೋ ನೆಮ್ಮದಿಯಾಗಿದ್ದು ಬಿಡೋಣ ಅಂತ ತಲೆ ತಪ್ಪಿಸಿಕೊಂಡು ಹೋಗೋದಕ್ಕಾಗುತ್ತ? ಎಲ್ಲಿ ಹೋಗ್ತೀರಿ? ಎಷ್ಟು ದಿನ ಓಡ್ತೀರಿ ಹೇಳಿ?"[೧೧] ( ಪು.ಸಂ. ೧೮೮ ರಲ್ಲಿ )

ಈ ಸನ್ನಿವೇಶವನ್ನು ಗಮನಿಸಿದಾಗ ಸುರೇಶ-ಗೌರಿಯರು ತಮ್ಮ ಮೇಲೆ ಹೇರಲ್ಪಟ್ಟ ಸ್ಥಿತಿಯಿಂದ ಬಿಡುಗಡೆ ಪಡೆಯುವ ರೀತಿಯನ್ನು ತುಂಬಾ ಸ್ವಾರಸ್ಯಕರವಾಗಿ ಚಿತ್ರಿಸುತ್ತಾರೆ. ಜನಪ್ರಿಯವಾದ ತಂತ್ರಗಾರಿಕೆಯ ಶೈಲಿಯು ತೇಜಸ್ವಿಯವರು ಮೈಗೂಡಿಸಿ

ಕೊಂಡಿರುವುದನ್ನು ಗಮನಿಸಬಹುದಾಗಿದೆ. ಇವರಿರ್ವರ ಪಾತ್ರಗಳಿಂದಲೇ ಕಾದಂಬರಿಗೆ ಒಂದು ಹೊಸ ಚೈತನ್ಯ ಉಂಟಾಗುವಂತೆ ನಿರೂಪಿಸಿದ್ದಾರೆ. ಜಗತ್ತಿನೆಲ್ಲ ವಿದ್ಯಮಾನಗಳನ್ನು ಒಳಗೊಂಡ ಸಂಕೀರ್ಣ ರೂಪಕವಾಗುತ್ತದೆ. ಹಣಕ್ಕಾಗಿ ಮನುಷ್ಯ ನಡೆಸುವ ಕಪಟ, ವಂಚನೆ, ಮತ್ತು ಹಿಂಸೆಗಳ ಸ್ವರೂಪವನ್ನು ಹೊಂದಿದೆ.

ದೇವಪುರವನ್ನು ನಿಯಂತ್ರಿಸುತ್ತಿರುವ ಅದೃಶ್ಯ ಶಕ್ತಿಗಳು, ಅಶರೀರ ಹಸ್ತಗಳು ಯಾವ ರೀತಿಯಲ್ಲಿ ಕೆಲಸ ಮಾಡುತ್ತಿವೆ ಎಂಬುದು ಮುಖ್ಯವಾಗುತ್ತದೆ. ಮನುಷ್ಯರ ಜಗತ್ತು ನಿಗೂಢವಾದುದು. ಈ ದೃಷ್ಟಿಯಿಂದ ಹೊಸ ಸೂಕ್ಷ್ಮಗಳೊಂದಿಗೆ, ಘನತೆಯ ಮೂಲಕ ಸೃಷ್ಟಿಗೊಂಡಿದೆ. ಕಳ್ಳರನ್ನು ಬೆನ್ನಟ್ಟುವ ಪೋಲೀಸರು, ಜೂಜುಕೋರರು, ದುಷ್ಟರು, ಮಾಫಿಯಾ ಗ್ಯಾಂಗ್‌ನವರು, ವ್ಯಾಪಾರಿಗಳು, ರೈತರು ಮತ್ತು ಜನ ಸಾಮಾನ್ಯರು ವ್ಯವಸ್ಥೆಯ ವಿರುದ್ಧ ನಡೆಯುವ ಘರ್ಷಣೆ ಇವೆಲ್ಲವನ್ನು ಸ್ವಾರಸ್ಯವಾಗಿ ಚಿತ್ರಿಸಲಾಗಿದೆ.

ಕಾದಂಬರಿಯಲ್ಲಿ ಬರುವ ಸುರೇಶ ಮತ್ತು ಗೌರಿ ನಮಗೆ ಭೇಟಿಯಾಗುವುದು ಜುಗಾರಿಕ್ರಾಸ್‌ನಲ್ಲಿ. ದೇವಪುರಕ್ಕೆ ಹೋಗುವ ಬಸ್‌ಗಾಗಿ ಕಾಯುತ್ತಿರುವಾಗ, ಕಾದಂಬರಿ ಮುಗಿಯುವುದು ಇವರಿಬ್ಬರೂ ಅದೇ ಜುಗಾರಿಕ್ರಾಸ್‌ಗೆ ಹೋಗಲು ಟಿಕೆಟ್ ತೆಗೆದುಕೊಳ್ಳುವುದರೊಂದಿಗೆ. ಇವರು ಇಬ್ಬರು ದೇವಪುರದ ಅಂತರಂಗದರ್ಶನ ಮಾಡಿಸುವ ಪಾತ್ರಗಳಾಗಿ ಮೂಡಿ ಬರುತ್ತಾರೆ. ಸಾಹಸಗಳ ಅನುಭವಗಳ ಅನ್ವೇಷಣೆಯಲ್ಲಿ ಇವರು ಇರುತ್ತಾರೆ. ತಂದೆಯಿಂದ ದುಡ್ಡು ಪಡೆದ ಸುರೇಶ, ಗೌರಿಯರು, ರಬ್ಬರ್ ತೋಟವೊಂದನ್ನು ಬಿಟ್ಟು ಉಳಿದೆಲ್ಲಾ ಹಾಕಿದರು. ಕಾಶ್ಮೀರದ ಕಂಟೆಂಡರ್‌ಬೀನ್ಸ್, ಹಾಲೆಂಡಿನ ಆಲೂಗಡ್ಡೆ, ಆಫ್ರಿಕಾದ ಅಸ್ಸಿರಿಯಾಮ್ಯುಟುಂಡನೆಲಗಡಲೆ, ಕಾಶ್ಮೀರದಿಂದ ಕೇಸರಿ, ಸಿಲೋನಿನಿಂದ ದಾಲ್ಚಿನ್ನಿ ಇನ್ನು ಅನೇಕ ರೀತಿಯ ಪ್ರಯೋಗವನ್ನು ಮಾಡುತ್ತಾರೆ. ಇಲ್ಲೆಲ್ಲಾ ಗಮನಿಸಿದಾಗ ಕಾದಂಬರಿಯು ಹೊಸ ಪ್ರಯೋಗದ ಸಾಧ್ಯತೆಯೊಂದಿಗೆ, ಹೊಸ ಸಮಾಜದ, ಹೊಸ ಜೀವನದ ಕ್ರಮಕ್ಕೆ ಮುಂದಾಗುವುದು ಗೋಚರವಾಗುತ್ತದೆ.

ದಟ್ಟ ಕಾಡಿನ ನಡುವೆ ನಾಲ್ಕಾರು ದಾರಿಗಳು ಕೂಡುವ ಒಂದು ನಿರ್ಜನ ಪ್ರದೇಶಕ್ಕೆ ' ಜುಗಾರಿಕ್ರಾಸ್' ಎಂದು ಹೆಸರು. ಸಾಮಾನ್ಯವಾಗಿ 'ಜುಗಾರಿ' ಎಂದರೆ 'ಜೂಜು' ಎಂಬ ಅರ್ಥ ಇದೆ. ಆದರೆ ಇದು ಅಷ್ಟಕ್ಕೆ ಮಾತ್ರ ಸೀಮಿತವಾಗಿರುವುದಿಲ್ಲ. ಬದಲಾಗಿ ಇದು ವಿಶಾಲಾರ್ಥವನ್ನು ಪಡೆದುಕೊಳ್ಳುತ್ತದೆ. ಹಾಗೆಯೇ ಜುಗಾರಿಕ್ರಾಸ್‌ಗೆ ಸಮೀಪದಲ್ಲಿರುವ ಮೇದರಹಳ್ಳಿಯು, ಪ್ಲಾಸ್ಟಿಕ್ ಯುಗದಿಂದಾಗಿ ಹಾಳೂರಾಗುತ್ತದೆ. ಆಧುನೀಕರಣ ಹೊಂದಿದ ಹಾಗೆ ಊರಿನ ಹೆಸರಿನಿಂದ ಹಿಡಿದು ಇಡೀ ಸಮಾಜವು ಪರಿವರ್ತನೆ ಹೊಂದುವುದನ್ನು ಗಮನಿಸಬಹುದು.

ಕಾಫಿ ಬೀಜಗಳನ್ನು ಸಸಿ ಮಾಡುವ ಬಿದಿರಿನ ಕುಕ್ಕೆಗೆ ಬದಲಾಗಿ, ಪ್ಲಾಸ್ಟಿಕ್ ಕವರ್‌ಗಳನ್ನು ಬಳಸತೊಡಗುತ್ತಾರೆ. ಇದರಿಂದ ಅಲ್ಲಿಯ ಯುವಕರಿಗೆ ಕೆಲಸವಿಲ್ಲದಾಗಿ

ಅವರು ಕೆಲಸ ಹುಡುಕುತ್ತಾ ಬೊಂಬಾಯಿಗೆ ಹೋಗಿ, ಮಾದಕವಸ್ತು ಜಾಲದಲ್ಲಿ ಕೆಲಸ ಮಾಡುತ್ತಾರೆ. ಇಲ್ಲೆಲ್ಲ ಗಮನಿಸಿದಾಗ ಒಂದು ಹಂತದಲ್ಲಿ ಪತ್ತೇದಾರಿ ಕಾದಂಬರಿಯಂತೆ ಕಂಡು ಬಂದರೂ ಒಂದು ಹಂತದಲ್ಲಿ ವಾಸ್ತವವಾದಿ ಕಾದಂಬರಿಯಾಗಿ ಮೂಡಿ ಬರುತ್ತದೆ. ಯಾವುದೇ ರೀತಿಯ ಕಲ್ಪನೆಗೆ ಅವಕಾಶ ಇಲ್ಲ. ನೈಜತೆಯ ಸ್ಪಷ್ಟತೆಯನ್ನು ದಾಖಲಿಸುತ್ತಾ ಹೋಗುತ್ತಾರೆ. ಕಾದಂಬರಿಯಲ್ಲಿ ' ಜುಗಾರಿಕ್ರಾಸ್' ಕೇಂದ್ರವಾಗಿದ್ದು ಅದರ ಸುತ್ತ ದೋಣಿಹೊಳೆ, ಕಾಡು, ದೇವನಪುರದ ಸುತ್ತಲಿನ ಪರಿಸರವು ಮುಖ್ಯ ಪಾತ್ರಗಳು ಆಗಿವೆ.

ಪರಿಸರವನ್ನು ಕೊಳ್ಳೆ ಹೊಡೆಯುವವರು, ಈ ಪರಿಸರದಲ್ಲಿದ್ದುಕೊಂಡು ಜುಗಾರಿಯಾಡುವವರು ಒಟ್ಟು ಜೀವನದ ಸೋಲು, ಗೆಲುವುಗಳನ್ನು ಕಂಡು ಅನುಭವಿಸಿದವರು. ಸಮಾಜದಲ್ಲಿ ನಡೆಯುವ ಇಂತಹ ಕೃತ್ಯಗಳನ್ನು ಯಾರು ಪ್ರಶ್ನಿಸುವುದಿಲ್ಲ. ಒಟ್ಟಿನಲ್ಲಿ ತೇಜಸ್ವಿಯವರು ನವ್ಯ ಮಾರ್ಗದ ಮುಖೇನ ಸಾಮಾಜಿಕ ಒಳವಿಚಾರಗಳನ್ನು ಆರಿಸಿಕೊಂಡು ಸ್ವಾರಸ್ಯಕರವಾಗಿ ಜನರ ಮುಂದೆ ಇಡುತ್ತಾರೆ. ಕಾದಂಬರಿಯಲ್ಲಿ ಅನೇಕ ರೀತಿಯ ಸಮಸ್ಯೆಗಳನ್ನು ಅತ್ಯಂತ ವೈಜ್ಞಾನಿಕವಾಗಿ ಮತ್ತು ವೈಚಾರಿಕತೆಯಿಂದ ಓದುಗರ ಮುಂದೆ ಇಡುತ್ತಾರೆ. ಕಾದಂಬರಿಯು ಶೋಧನೆಯ ಮುಖಾಂತರ ಜನರ ಮನಸ್ಸಿನಲ್ಲಿ ಭಾವ–ವಿಚಾರ ಪರವಶವಾಗುವಂತೆ ಮಾಡುವುದು ತೇಜಸ್ವಿಯವರ ಈ ಕಾದಂಬರಿಯನ್ನು ನೋಡಿದಾಗ ಗೊತ್ತಾಗುತ್ತದೆ.

ತೇಜಸ್ವಿಯವರಿಗೆ ಜುಗಾರಿಕ್ರಾಸ್‌ನ ಸಾಂಸ್ಕೃತಿಕ, ಸಾಮಾಜಿಕ ಮೌಲ್ಯಗಳು ಮುಖ್ಯವಾಗುತ್ತದೆ. ಜನರು ಆರ್ಥಿಕವಾಗಿ ಮುಂದುವರಿದು ಕಾನೂನುಬಾಹಿರ ವಹಿವಾಟುಗಳಲ್ಲಿ ಮುಂದುವರಿಯುತ್ತಾರೆ. ತಾವು ದಿಢೀರ್ ಶ್ರೀಮಂತಿಕೆಯನ್ನು ಹೊಂದಬೇಕು ಎಂಬ ತಾತ್ವಿಕ ಚಿಂತನೆಯು ಎಲ್ಲಾ ಪರಿಸರದ ಜನರಲ್ಲಿಯೂ ದಟ್ಟವಾಗಿ ಗೋಚರಿಸುತ್ತದೆ. ಸಾಮಾಜಿಕ ವಸ್ತುವೇ ಕಥಾವಸ್ತುಗಳಾಗಿ ಮೂಡಿಬಂದಿದೆ. ಅಲ್ಲದೆ ಇಲ್ಲಿಯ ಪಾತ್ರಗಳು ಗೌಣವಾಗುತ್ತವೆ. ತೇಜಸ್ವಿಯವರು ಈ ಕಾದಂಬರಿ ಓದಿದಾಗ ಏನು ಅನ್ನಿಸುತ್ತದೆಯೋ ಅದಷ್ಟೇ ಮುಖ್ಯ ಎನ್ನುತ್ತಾರೆ. ಸಹ್ಯಾದ್ರಿಯ ಕಾಡಿನೊಳಗೆ ನಡೆಯುವ ಭೀಕರ ಕಳ್ಳದಂಧೆಗಳು ಮತ್ತು ಅವ್ಯವಹಾರದಿಂದಾಗಿ ನಡೆಯುವ ಸಾಮಾಜಿಕ ಸ್ಥಿತ್ಯಂತರಗಳು ನಮಗೆ ಕಾದಂಬರಿಯು ನೀಡುವ ಮುಖ್ಯ ಅನುಭವ ಆಗುತ್ತದೆ. ಜುಗಾರಿಕ್ರಾಸ್‌ನ್ನು ಓದುತ್ತ ಹೋದಂತೆ, ಇಲ್ಲಿ ನಡೆಯುವ ಘಟನೆಗಳ ವಿವರವು ನಮಗೆ ಒಂದು ರೀತಿಯ ಭ್ರಮೆ– ಭಯ ಮತ್ತು ಅಸಹಾಯಕತೆಯನ್ನು ಉಂಟು ಮಾಡುತ್ತದೆ.

ಜುಗಾರಿಕ್ರಾಸ್‌ಗೆ ಸಮೀಪವಾದ ಮೇದರಹಳ್ಳಿ, ದೇವಪುರ ಈಗ ನಾಗರೀಕತೆಯನ್ನು ಮುಟ್ಟಿದೆ. ಇಲ್ಲಿಯ ಮುಖ್ಯ ಬೆಳೆಗಳಾದ ಕಾಫಿ, ಏಲಕ್ಕಿ, ತೋಟಗಳಿಂದಾಗಿ ಜನರು ಪಟ್ಟಣದ ಮೊರೆ ಹೋಗಿದ್ದಾರೆ. ಪಾರಂಪರಿಕವಾಗಿ ಬಂದಿರುವ ಕಳ್ಳದಂಧೆಯು ನಮ್ಮ

ರಾಜಕೀಯ, ಸಾಮಾಜಿಕ ಸ್ಥಿತ್ಯಂತರಗಳು ಅಧೋಗತಿಗೆ ಇಳಿಯುವಂತೆ ಮಾಡಿದೆ. ಜನಸಾಮಾನ್ಯರ ಅಸ್ಥಿತ್ವ ನಶಿಸಿ ಹೋಗುವುದನ್ನು ಕಾಣುತ್ತೇವೆ. ಸಾಮಾನ್ಯವ್ಯಕ್ತಿಗಳ ಬದುಕು ತೇಜಸ್ವಿಯವರಿಗೆ ಒಳ್ಳೆಯ ಪಾತ್ರಗಳು ಆಗಿವೆ. ಕಳ್ಳಸಾಗಣೆದಾರರ ಗ್ಯಾಂಗಿನ ಪೈಕಿ ಇಬ್ಬರು ಒಂದು ಪ್ಯಾಕೆಟನ್ನು ಸಾಗಿಸುವ ಯತ್ನದಲ್ಲಿ ಪೋಲೀಸರಿಗೆ ಭಯಪಟ್ಟ ಚಿಕ್ಕ ಮುಗ್ಧ ಹುಡುಗಿಯನ್ನು ಸಂಶಯಪಟ್ಟು ಕ್ಯಾಪ್ಟನ್ ಖುದ್ದೂಸನ ಘಾಟಿ ಎಕ್ಸ್‌ಪ್ರೆಸ್‌ಗೆ ಹತ್ತಿ ತಾವು ತಂದ ವಸ್ತುವನ್ನು ನಾಟಕೀಯ ಎಂಬಂತೆ ಸುರೇಶ– ಗೌರಿಯರು ಗಾನ್‌ಕೇಸ್ ಪತಿ –ಪತ್ನಿಯರು ಮಾರಾಟಕ್ಕೆಂದು ತಂದ ಏಲಕ್ಕಿಯ ಮೂಟೆಯೊಳಗಿಟ್ಟು ನಂತರ ಪಡೆದುಕೊಳ್ಳುವ ಸಂಚುಹುಡುಕುವುದನ್ನು ಗಮನಿಸಬಹುದು. ಆದರೆ ಇವರ ಸಂಚಿಗೆ ಬೊಳ್ಳಮ್ಮನ ವಾಂತಿ ಪ್ರಕರಣ, ಬಸ್‌ಸ್ಟಾಂಡಿನಲ್ಲಿ ಪೋಲೀಸರ ಅಸ್ಥಿತ್ವ ಇವುಗಳಿಂದಾಗಿ ಅವರು ಸಫಲರಾಗುವುದಿಲ್ಲ.

ಏಲಕ್ಕಿಯನ್ನು ಅನಿವಾರ್ಯವಾಗಿ ಕೊಂಡುಕೊಳ್ಳಬೇಕಾದ ಅನಿವಾರ್ಯತೆ ಕಳ್ಳಮಂದಿಗೆ ಮುಂದೆ ಏಲಕ್ಕಿಯನ್ನು ಒಂದಕ್ಕೆ ಹತ್ತು ಬೆಲೆ ತೆತ್ತು ಪಡೆದುಕೊಂಡ ನಂತರ, ಈ ವ್ಯವಹಾರದ ಸುಳಿವೇ ಇಲ್ಲದ ಸುರೇಶ– ಗೌರಿಯರಿಂದ ಒಂದೂವರೆ ಲಕ್ಷ ರೂಪಾಯಿಗಳನ್ನು ಹೊಡೆಯುವ ಸಂಚು ಇವರದ್ದು. ಇವರ ಚೆಕ್ಕನ್ನು ಶೇಷಪ್ಪನು ಮುರಿಯುತ್ತಾನೆ. ಇವರ ರಕ್ಷಣೆಗಾಗಿ ಒದಗಿ ಬರುವ ಡಿಟೆಕ್ಟಿವ್ ಆದ ಸಂಶೋಧಕನ ಸೋಗಿನಲ್ಲಿರುವ ಸುರೇಶನ ಹಳೇಯ ಮಿತ್ರ ರಾಜಪ್ಪ. ಕೇಡಿಗರು ತಮ್ಮನ್ನು ಹಿಂಬಾಲಿಸುತ್ತಾರೆ ಎಂದು ತಿಳಿದ ಸುರೇಶ– ಗೌರಿಯರು ಬಸ್ಸನ್ನು ಬಿಟ್ಟು ರೈಲು ಗಾಡಿ ಏರುತ್ತಾರೆ.

ರಾಜಪ್ಪನ ಹಳೆಯ ' ಉತ್ತುಂಗ ರಾಜನ ಕಥೆ' ಯ ಗ್ರಂಥದಿಂದ ಸುರೇಶನಿಗೆ ಸಹ್ಯಾದ್ರಿಯ ರತ್ನ ಮೂಲದ ಕುರಿತು ಬೆಳಕು ತೋರುತ್ತದೆ. ರಾಜಪ್ಪನಿಗೆ ತಮ್ಮ ಎಲ್ಲ ಹಣವನ್ನು ನೀಡಿ ಈ ಗ್ರಂಥದ ಶಿಥಿಲ ಹಾಳೆಗಳ ಕಡತದೊಂದಿಗೆ ಸುರೇಶ–ಗೌರಿ ಕತ್ತಲಲ್ಲಿ ನಿಧಾನವಾಗಿ ಚಲಿಸುವ ರೈಲುಗಾಡಿಯಿಂದ ಹಾರಿ ಬಚಾವಾಗುತ್ತಾರೆ. ಆದರೆ ಕಡತ ಮಾತ್ರ ಆಳದ ಕಮರಿಗೆ ಬಿದ್ದು ಕಳೆದು ಹೋಗುತ್ತದೆ. ತಪ್ಪಿಸಿ ಕೊಂಡು ಹೋಗುವ ಈ ಸಂಚಾರಕ್ಕೆ ಕುಂಟರಾಮ ದೇವಪುರದ ಭೂತವರ್ತಮಾನದ ಕೈಗನ್ನಡಿಯಾಗುತ್ತಾನೆ. ಅವನ ಬೆಂಬಲದಲ್ಲಿ ದಾಟಿ ಬರುವ ಸುರೇಶ–ಗೌರಿಗೆ ರಾಜಪ್ಪ ಶ್ರೀರಕ್ಷೆಯಾಗಿ ರೈಲಿನೊಳಗಿದ್ದನೆಂದು ಗೊತ್ತಾಗುತ್ತದೆ. ಹಣಕ್ಕಾಗಿ ಇವರನ್ನು ಬೆನ್ನಟ್ಟಿ ಬಂದ ಮಂದಿ ನಿರಾಶೆಯಿಂದ ಹೋಗುತ್ತಾರೆ. ಕೇಡಿಗಳನ್ನು ದಸ್ತಗಿರಿ ಮಾಡುವ ಕಾಲ ಹತ್ತಿರವಾಗಿದೆಯೆಂದು ಸೂಚನೆ ಸಿಗುತ್ತದೆ. ನಿರಾಳ ಮನಸ್ಸಿನಿಂದ ಸುರೇಶ–ಗೌರಿ ರಾಜಪ್ಪನ ಸಹಿತ ಕ್ಯಾಪ್ಟನ್ ಖುದ್ದೂಸನ ' ಘಾಟಿ ಎಕ್ಸ್‌ಪ್ರೆಸ್' ನಲ್ಲಿ ಮತ್ತೆ ಜುಗಾರಿಕ್ರಾಸ್‌ನ ಬಳಿಯ ತಮ್ಮ ಮನೆಗೆ ತಿರುಗುತ್ತಾರೆ.

ಈ ಕಥಾವಸ್ತುವನ್ನು ಗಮನಿಸಿದಾಗ ಕೇಂದ್ರಸ್ಥಾನದಲ್ಲಿದ್ದ ' ಜುಗಾರಿಕ್ರಾಸ್' ಬದುಕಿನ

ವಿವಿಧ ಆಯಾಮಗಳನ್ನು ಪಡೆದುಕೊಳ್ಳುತ್ತದೆ. ಸಮಾಜದಲ್ಲಿ ನಡೆಯುತ್ತಿರುವ ವಿವಿಧ ಚಟುವಟಿಕೆಗಳಿಂದ ಅನೇಕ ರೀತಿಯ ವೈಚಾರಿಕತೆಯನ್ನು ಉಂಟು ಮಾಡಿದೆ.

"ತಮ್ಮ ಜಾತಿಯವನೊಬ್ಬ ಅರಣ್ಯಮಂತ್ರಿಯಾಗಿದ್ದಾಗ"[೨೨] ಫಾರೆಸ್ಟರ್ ಇಕ್ಬಾಲ್-ಸಾಬ ಅರಣ್ಯಾಧಿಕಾರಿಗಳು ಜುಗಾರಿಕ್ರಾಸ್‌ಗೆ ವರ್ಗಾವಣೆ ಆಗಿ ಬರುವುದು, ಕಳ್ಳ ಸಾಗಾಣಿಕೆಯಲ್ಲಿ ಅರಣ್ಯ ಇಲಾಖೆಯು ಪಾತ್ರ ವಹಿಸುವುದು, ಏಲಕ್ಕಿ ವಹಿವಾಟಿನಲ್ಲಿರುವ ಜುಗಾರಿಕ್ರಾಸ್ ಹಾಗೆಯೇ ಮೂಕಿಯಾಗಿ ಬೆಳೆಯುವ ಹೆಸರಿಲ್ಲದ ಹುಡುಗಿ, ಪೋಲೀಸ್ ಸ್ಟೇಷನ್ನು, ಗಂಗೂಲಿಯ ಪುಕ್ಕಲುತನ, ಸುರೇಶ-ಗೌರಿಯರ ಪಾತ್ರಗಳು ಇನ್ನು ಮುಂತಾದ ಅನೇಕ ರೀತಿಯ ಹಲವು ಮುಖಗಳ ದರ್ಶನವನ್ನು ಕಲಾತ್ಮಕವಾಗಿ ವೈಚಾರಿಕತೆಯನ್ನು ಸಾಮಾಜಿಕ ಅಂತಸ್ತಿನಲ್ಲಿ ತಿಳಿಯಪಡಿಸುತ್ತಾರೆ. ಪ್ರತಿಯೊಂದು ಪಾತ್ರ ಚಿತ್ರಣಗಳು ಒಂದಕ್ಕೊಂದು ಕೊಂಡಿಯಂತೆ ಬೆಸೆದುಕೊಂಡಿದೆ. ಕಾದಂಬರಿಯಲ್ಲಿ ಹುಟ್ಟುವ ಪಾತ್ರಗಳು, ಅವು ವಾಸ್ತವವಾದಿ ಸ್ವರೂಪದ್ದು. ಇಲ್ಲಿ ಯಾವುದೇ ರೀತಿಯ ಕಟ್ಟುಕತೆಗಳಿಗೆ ಆಸ್ಪದವಿಲ್ಲ. ಮೇಲೆ ತಿಳಿಸಿದಂತೆ, ಕೇಡಿಗಳು ಹಿಂಬಾಲಿಸುತ್ತಿದ್ದಾರೆಂಬ ಗುಮಾನಿಯ ನಂತರ ಸುರೇಶ-ಗೌರಿಗೆ ಅನೇಕ ಕಡೆಗಳಲ್ಲಿ ಸಂಶಯವು ಮೂಡಿ ಬರುತ್ತದೆ. ಈ ಕಾದಂಬರಿಯ ಅಂತಸ್ಸತ್ವವು ಈ ರೀತಿಯ ಸಹಜ ರೂಪದಲ್ಲಿ ಚಿತ್ರಿತಗೊಂಡಿದೆ.

ಇಡೀ ಕಾದಂಬರಿಯು ' ಜುಗಾರಿಕ್ರಾಸ್' ಎಂಬ ಕೇಂದ್ರಸ್ಥಾನದ ಸುತ್ತ ಸುತ್ತಿ ನಮ್ಮ ಕಣ್ಣ ಮುಂದೆ ನೈಜತೆಯ ಸ್ವರೂಪವನ್ನು ತೇಜಸ್ವಿ ಬಿಂಬಿಸುತ್ತಾರೆ. ಈ ಕಾಲದ ಎಲ್ಲಾ ರೀತಿಯ ವಿಸ್ಮಯತೆಯನ್ನು ಸಾಮಾಜಿಕ ದುಸ್ತರಗಳ ಮಧ್ಯೆ ಪ್ರದರ್ಶಿಸುತ್ತಾರೆ. ಮತ್ತು ತೇಜಸ್ವಿಯವರ ಅಭಿವ್ಯಕ್ತ ಮಾಧ್ಯಮವಾಗಿ ಜುಗಾರಿಕ್ರಾಸ್‌ನ ಪರಿಸರವೇ ಮುಖ್ಯವಾಗಿದೆ. ಇಲ್ಲಿನ ಕ್ರಿಯಾ ಪ್ರಪಂಚ ಅತ್ಯಂತ ವೇಗವಾಗಿ ನಡೆಯುತ್ತದೆ. ತಮ್ಮ ತಮ್ಮ ವರ್ತುಲಗಳ ಸೀಮಿತತೆಯ ಅರಿವು ಇಲ್ಲಿನ ಎಲ್ಲ ಮುಖ್ಯ ಪಾತ್ರಗಳಿಗೆ ಇದೆ. ತಮ್ಮ ಕ್ರಿಯೆಗಳ ಬಗ್ಗೆ ಅವರು ಜಾಗೃತರೂ, ಉತ್ಸುಕರೂ ಆಗಿದ್ದಾರೆ. ಜುಗಾರಿಕ್ರಾಸ್‌ನ ಚಟುವಟಿಕೆಗಳ ಚಿತ್ರವನ್ನು ಕಟ್ಟಿ ಕೊಡುವಾಗ ಕಾದಂಬರಿಯು ಪುರಾಣ ಸೃಷ್ಟಿಯ ಹಲವು ಸಾಧ್ಯತೆಗಳನ್ನು ಸೂರೆಗೊಳ್ಳುವ ಮಹತ್ವಾಕಾಂಕ್ಷೆಯನ್ನು ಪ್ರಕಟಿಸುತ್ತದೆ. ದೌಲತ್‌ರಾಂ ಮತ್ತು ಕುಟ್ಟಿ ತಮ್ಮ ಕೆಲಸದಲ್ಲಿ ಸ್ವಲ್ಪ ಎಡವಟ್ಟು ಮಾಡಿಕೊಂಡು ಶಾಸ್ತ್ರೀಯ ಬಳಿಗೆ ಬಂದು ಸಿಟ್ಟು ಮಾಡಿದಾಗ ಶಾಸ್ತ್ರಿ ನೀಡುವ ಹಿತೋಪದೇಶ ಈ ಭೂಗತ ಜಗತ್ತನ್ನು ಅರ್ಥೈಸುವ ತತ್ತ್ವಜ್ಞಾನದಂತೆ ಕೇಳುತ್ತದೆ. " ಇದೆಲ್ಲ ವ್ಯವಹಾರ ಹ್ಯಾಗೆ ಅಂತ ನಿಂಗೊತ್ತಿಲ್ಲ ಕುಟ್ಟಿ' ಯಾರಿಗೂ ಏನು ಗೊತ್ತಿರೋಲ್ಲ. ಒಟ್ಟಾಸಿ ದೇವ್ರೇಗತಿ ಅಂತ ಧೈರ್ಯ ಮಾಡಬೇಕಷ್ಟೆ !"[೨೩] ( ಪು.ಸಂ.೭೪ರಲ್ಲಿ )

ಕೆಂಪು ಕಲ್ಲುಗಳು ದೋಣಿ ಹೊಳೆ ದಂಡೆಯಲ್ಲಿ ಸಿಗುತ್ತದೆ ಎಂದು ಹೇಳಲಾಗಿರುವ ಕುರಿತು ಇನ್ನೊಂದು ಪುರಾಣವು ದೇವಪುರದ ಜೀವನಕ್ಕೆ, ನಿಗೂಢತೆಯನ್ನು,

ರಹಸ್ಯಮಯತೆಯನ್ನು ಉಂಟು ಮಾಡಿದೆ. ಅದು ಸಿಗುವ ನಿರ್ದಿಷ್ಟ ಜಾಗ ಯಾರಿಗೂ ಖಚಿತವಾಗಿ ಗೊತ್ತಿಲ್ಲ. ದೇವಪುರದ ಎಲ್ಲ ಚಟುವಟಿಕೆಗಳು ಯಾರಿಗೂ ಕೂಡ ಶೋಧಿಸಲಾರದ ಸಂಗತಿ ಆಗುತ್ತದೆ. ಜುಗಾರಿಕ್ರಾಸ್ ಕಟ್ಟಿಕೊಡುವ ಜೀವನ ವ್ಯವಸ್ಥೆಯನ್ನು ಇನ್ನೊಂದು ನೆಲೆಯಿಂದ ಪರಿಭಾವಿಸಲು ಸಾಧ್ಯವಿದೆ. ಕರಾಳ ಜಗತ್ತಿನ ಚಟುವಟಿಕೆಗಳನ್ನು ಗಮನಿಸಿಕೊಂಡು ಕೂಡ ಒಂದು ನೆಲೆಯಲ್ಲಿ ಚಿತ್ತಸ್ವಾಸ್ಥ್ಯವನ್ನು ಕಾಪಾಡಿಕೊಳ್ಳಲು ನೈತಿಕ ಆಯಾಮ ಸಿದ್ಧಿಸಿದೆ. ಸುರೇಶ–ಗೌರಿಯರು ರತ್ನಮೂಲ ರಹಸ್ಯವನ್ನು ತನ್ನಲ್ಲಿ ಅಡಗಿಸಿಕೊಂಡಿದ್ದ ಗುರುರಾಜ ಕವಿಯ ಕಾವ್ಯಕಡತ ದೋಣಿಹೊಳೆ ಪಾಲಾಗುತ್ತದೆ. ಅದು ಇವರಿಗೆ ಅಮೂಲ್ಯ ಎಂದು ಗೊತ್ತಿದ್ದರೂ ಕೂಡ ಮಹತ್ತ್ವವಾಗುವುದು ಭೂಗತ ಜಗತ್ತಿನ ಪಾತಕಿಗಳಿಗೆ ಮುಖ್ಯವೆನಿಸುವ ಕಾರಣಗಳಿಗಾಗಿ ಅಲ್ಲ ಎಂಬುವುದನ್ನು ಕಾದಂಬರಿಯ ಕೊನೆಯ ಅಧ್ಯಯಗಳಲ್ಲಿ ಸುರೇಶ–ಗೌರಿಯರ ಸಂಭಾಷಣೆ, ಚರ್ಚೆ, ಜಿಜ್ಞಾಸೆಯಲ್ಲಿ ಸ್ಪಷ್ಟವಾಗಿ ಸೂಚಿತವಾಗಿದೆ.

"ಯಾರಾದರೂ ಒಬ್ಬರ ಪ್ರಜ್ಞಾಪೂರ್ವಕ ಪ್ರಯತ್ನದಿಂದ ಹುಟ್ಟಿ ರೂಪುಗೊಂಡು ವಿಕಾಸವಾಗುತ್ತ ಬಂದಿರುವ ವ್ಯವಸ್ಥೆಯೇ ಇದು?"[೧೪] ಎಂಬ ಪ್ರಶ್ನೆ ಕಾದಂಬರಿಯಲ್ಲಿದೆ. ಮತ್ತು ಜಗತ್ತು ಎಂಬುವುದು ಅದು ದೈವನಿಯಾಮಕ. ಇಲ್ಲಿಯ ಕಾರ್ಯ ಕಾರಣಗಳಿಗೆ ಆತನೇ ಕಾರಣನೆಂಬ ಊಹೆಯ ಖಂಡನೆ ಇದೆ. ಕಾದಂಬರಿಯ ಪಾತ್ರಗಳಿಗೆ ಹುಟ್ಟುವ ಸಂಶಯ ಪ್ರಜ್ಞಾ ಪೂರ್ವಕವಾದುದಲ್ಲ. ಅವು ತೀರಾ ಸಹಜವಾಗಿದೆ. ಕೇಡಿಗಳು ಹಿಂಬಾಲಿಸುತ್ತಿದ್ದಾರೆಂಬ ಗುಮಾನಿಯ ನಂತರ ಸುರೇಶ–ಗೌರಿಗೆ " ಒಂದು ಸುತ್ತು ಪೇಟೆ ಬೀದಿಯಲ್ಲಿ ತಿರುಗುವುದರೊಂದಿಗೆ ಅವರಿಬ್ಬರಿಗೂ ಅತ್ತಿತ್ತ ನೋಡುತ್ತ ಅವನಿರಬಹುದೇ? ಇವನಿರಬಹುದೇ? ಎಂಬ ಸಂಶಯಪಡುತ್ತ ಓಡಾಡುವುದರ ಬಗ್ಗೆ ರೇಜಿಗೆ ಹುಟ್ಟಿ ತಮ್ಮ ಜಾಗರೂಕತೆ ಜೀವಭಯವೆಂದೆನ್ನಿಸಿ ನಾಚಿಕೆಯಾಗತೊಡಗಿತು."[೧೫] ಕಾದಂಬರಿಯ ಅಂತಸ್ಸತ್ವ ಈ ರೀತಿಯ ಸಹಜ ಅನನ್ಯವಾದ ಬರವಣಿಗೆಯಲ್ಲೆ ಇದೆ ಎನ್ನಬಹುದು.

ಮಾನವರಲ್ಲಿ ಅಡಗಿರುವ ಅಪರಿಮಿತ ಚೈತನ್ಯವು ರೂಢಿಗೆ ಬಿದ್ದು ಹೋಗಿರುವ ಸಾಂಪ್ರದಾಯಿಕ ಸಮಾಜದಲ್ಲಿ ಸಿಲುಕಿ ಪೂರ್ಣ ಪ್ರಮಾಣದಲ್ಲಿ ಪ್ರಕಟವಾಗುತ್ತಿಲ್ಲ. ಆದ್ದರಿಂದ ಸಮಾಜದ ಅನಿಸಿಕೆಗಳಿಗೆ ಹೆದರದೆ ತಮ್ಮ ಒಳಗಿನ ತುಡಿತದಂತೆ ಕ್ರಿಯಾಶೀಲವಾಗುವ ಬದುಕಿನ ಹಾದಿಯನ್ನು ಆರಿಸಿಕೊಳ್ಳಬೇಕು ಎಂದು ತೇಜಸ್ವಿ ಭಾವಿಸಿದರು. ಸಮಾಜವು ಇವರ ಕಥನದಲ್ಲಿ ಎದುರಾಳಿಯಾಗಿ ಬರುತ್ತದೆ. ತಲೆಗೆ ಏನಾದರೂ ಹುಚ್ಚು ಹತ್ತಿಸಿಕೊಂಡು ಮನೆ ಬಿಟ್ಟು ' ಪೋಲಿ' ತಿರುಗುವವರೆ ಇವರ ಕಥನದ ಹೀರೋಗಳು ಆಗುತ್ತಾರೆ. ಉದಾ: ಕರ್ವಾಲೊನ ಮಂದಣ್ಣ, ಪ್ರಭಾಕರ, ನಿರೂಪಕ, ಪ್ಯಾರಾ, ಜುಗಾರಿಕ್ರಾಸಿನ ಸುರೇಶ ಇತ್ಯಾದಿ

ನಾವು ನಿರ್ಮಿಸಿಕೊಂಡ ಸಮಾಜ ಮತ್ತು ವೈಜ್ಞಾನಿಕ ಸಂಶೋಧನೆಗಳಿಂದ ಪಡೆದ

ಆಧುನಿಕ ಅನುಕೂಲತೆಗಳು ನಮ್ಮ ಸುತ್ತ ತಪ್ಪಿಸಿಕೊಳ್ಳಲಾರದಂತೆ ನಾವೇ ಹೆಣೆದು ಕೊಂಡ ಬಲೆಗಳು. ಜುಗಾರಿಕ್ರಾಸ್‌ನಲ್ಲಿ ದೇವಪುರಕ್ಕೆ ಬಂದ ಟೆಲಿಪೋನಿನ ವಿವರಗಳು ಸೂಚಿಸುವುದು ಇದನ್ನೇ. ಇಂತಹ ಸಮಾಜದಲ್ಲಿ ಪ್ರಕೃತಿ ಪ್ರಪಂಚ ಹಾಗೂ ಮಾನವ ಪ್ರಪಂಚ ಇದರಲ್ಲಿ ಬದುಕುವ ಮಾನವನ ಜೀವನಕ್ರಮ ಅಥವಾ ಬದುಕನ್ನು 'ಅಸಂಗತ' ಎಂಬುವುದಾಗಿ ತೇಜಸ್ವಿ ಸೂಚಿಸುತ್ತಾರೆ. ಎಲ್ಲರ ಎಲ್ಲಾ ದೇವರೂ ಒಂದೇ ಅಲ್ಲವೇ? ಎಂದು ಕೇಳುವ ' ಜುಗಾರಿಕ್ರಾಸ್'ನ ನಿರೂಪಕ ಹೇಳುವುದು. " ಎಲ್ಲ ಧರ್ಮಗಳು ಸೇರುವುದು ಕೊನೆಗೆ ಒಂದೇ ಬಾಸ್ ಹತ್ತಿರ" [೧೬] ಸಹಜ ಪ್ರಕೃತಿ ಹಾಗೂ ಸೃಷ್ಟಿಸಿಕೊಂಡ ಭೂಗತ ಸಮಾಜ ಎರಡರ ಸಮೀಕರಣದಲ್ಲಿ ಹೇಳುವುದು " ಯಾರು ಕೊಲೆಖೂನಿ ದಾನ ಧರ್ಮ ಇತ್ಯಾದಿ ಯಾವ ಕಾರ್ಯಕ್ಕೂ ಯಾರಿಗೂ ಸಮಜಾಯಿಷಿ ಕೊಡಬೇಕಾಗಿಲ್ಲವೋ ಅವನ್ನೇ ಬಾಸ್! "[೧೭] ಕೊನೆಗೂ ತಲುಪುವ ನಿರ್ಣಯ ನಂಬಿಕೆ ಬಾಸ್‌ಗಿಂತ ಮುಖ್ಯ. ಏಕೆಂದರೆ ನಂಬಿಕೆ ಬಾಸ್‌ನ ಸೃಷ್ಟಿಸುತ್ತದೆ, ರೂಪಿಸುತ್ತದೆ.

ನಮ್ಮ ಕಾಲದ ಎಲ್ಲ ವಿಷಣ್ಣತೆ ಮತ್ತು ವಿಸ್ಮಯತೆಯನ್ನು ಸಾಮಾಜಿಕ ದುಸ್ತರಗಳ ಮಧ್ಯೆ ಪ್ರದರ್ಶಿಸುತ್ತಾರೆ. ಎಲ್ಲೂ ಯಾವುದೂ ಗೋಜಲಾಗುವುದಿಲ್ಲ ಎಂಬುವುದೇ ತೇಜಸ್ವಿಯವರ ಬರವಣಿಗೆಯ ಒಂದು ಮುಖ್ಯ ಅಂಶ. ಆದರೆ ಪರಿಸರವೇ ಅವರ ಅತ್ಯಂತ ಪ್ರಭಾವಿ ಅಭಿವ್ಯಕ್ತ ಮಾಧ್ಯಮವೆಂಬುವುದು ಇನ್ನೊಂದು ಅಂಶವಾಗುತ್ತದೆ. ವೈಜ್ಞಾನಿಕ ಬರವಣಿಗೆ ಅವರ ಕೈಯಲ್ಲಿ ಆ ಪ್ರಕಾರದ ಲೇಖನವಾದರೆ ಕಾದಂಬರಿ ಸ್ವಯಂಸಿದ್ಧವಾಗಿ ಪರಿಪೂರ್ಣಗೊಳ್ಳುತ್ತದೆ. ಇದು ತೇಜಸ್ವಿಯವರ ಮತ್ತು 'ಜುಗಾರಿಕ್ರಾಸ್'ನ ವೈಶಿಷ್ಟ್ಯಪೂರ್ಣ ಯಶಸ್ಸು ಆಗಿದೆ. ಈ ಕಾದಂಬರಿಯನ್ನು ನಾವು ಕೇವಲ ಭೂಗತಜಗತ್ತಿನ ಖದೀಮ ವ್ಯವಹಾರಗಳನ್ನು ರೋಚಕವಾಗಿ ವರ್ಣಿಸುವ ಕಾದಂಬರಿ ಎಂಬುವುದಾಗಿ ತಪ್ಪು ತಿಳಿಯಬಾರದು. ' ಜುಗಾರಿಕ್ರಾಸ್' ನಮಗೆ ಮುಖ್ಯವಾಗುವುದು ಅದರ ಆಧ್ಯಾತ್ಮಿಕ ಶೋಧಕ್ಕಾಗಿ. ಇದು ಕಟ್ಟಿಕೊಡುವ ಜೀವನ ವ್ಯವಸ್ಥೆಯನ್ನು ತದ್ವಿರುದ್ಧವಾದ ಇನ್ನೊಂದು ನೆಲೆಯಿಂದಲೇ ಪರಿಭಾವಿಸಲು ಸಾಧ್ಯ. ಕಾದಂಬರಿಯಲ್ಲಿ ಈ ನೆಲೆಗಳು ನಮಗೆ ಅಲ್ಲಲ್ಲಿ ಗೋಚರಿಸುತ್ತದೆ. ಈ ರೀತಿಯ ಕರಾಳ ಜಗತ್ತಿನಲ್ಲಿ ಖದೀಮ ಚಟುವಟಿಕೆಗಳನ್ನು ಗಮನಿಸಿಯೂ ನಮ್ಮ ಚಿತ್ತಸ್ವಾಸ್ಥವನ್ನು ಕಾಪಾಡಿಕೊಳ್ಳಲು ಅಗತ್ಯವಾದ ನೈತಿಕ ಆಯಾಮವು ಕಾದಂಬರಿಗೆ ಸಿದ್ಧಿಸಿದೆ.

## ಅಡಿ ಟಿಪ್ಪಣಿಗಳು

೧) ರಮೇಶ್ ಬಿ.ಗೋ. 'ಪೂರ್ಣಚಂದ್ರ ತೇಜಸ್ವಿ' ದಿವ್ಯಚಂದ್ರ ಪ್ರಕಾಶನ ಬೆಂಗಳೂರು 2007 ಪು.ಸಂ 55

೨) ರಮೇಶ್ ಬಿ.ಗೋ. 'ಪೂರ್ಣಚಂದ್ರ ತೇಜಸ್ವಿ' ದಿವ್ಯಚಂದ್ರ ಪ್ರಕಾಶನ ಬೆಂಗಳೂರು 2007 ಪು.ಸಂ 56

೩) ರಮೇಶ್ ಬಿ.ಗೋ. 'ಪೂರ್ಣಚಂದ್ರ ತೇಜಸ್ವಿ' ದಿವ್ಯಚಂದ್ರ ಪ್ರಕಾಶನ ಬೆಂಗಳೂರು 2007 ಪು.ಸಂ 56

೪) ಅಶೋಕ ಟಿ.ಪಿ 'ತೇಜಸ್ವಿ ಕಥನ' ಅಕ್ಷರ ಪ್ರಕಾಶನ ಹೆಗ್ಗೋಡು ಸಾಗರ ಕರ್ನಾಟಕ 2004 ಪು.ಸಂ 88

೫) ಅಶೋಕ ಟಿ.ಪಿ 'ತೇಜಸ್ವಿ ಕಥನ' ಅಕ್ಷರ ಪ್ರಕಾಶನ ಹೆಗ್ಗೋಡು ಸಾಗರ ಕರ್ನಾಟಕ 2004 ಪು.ಸಂ 89

೬) ಅಶೋಕ ಟಿ.ಪಿ 'ತೇಜಸ್ವಿ ಕಥನ' ಅಕ್ಷರ ಪ್ರಕಾಶನ ಹೆಗ್ಗೋಡು ಸಾಗರ ಕರ್ನಾಟಕ 2004 ಪು.ಸಂ 90

೭) ಅಶೋಕ ಟಿ.ಪಿ 'ತೇಜಸ್ವಿ ಕಥನ' ಅಕ್ಷರ ಪ್ರಕಾಶನ ಹೆಗ್ಗೋಡು ಸಾಗರ ಕರ್ನಾಟಕ 2004 ಪು.ಸಂ 90-91

೮) ಪ್ರಹ್ಲಾದ್ ಡಿ.ವಿ (ಸಂ) 'ತೇಜಸ್ವಿ ಲೋಕ' ಸಂಚಯ ಪ್ರಕಾಶನ ಬೆಂಗಳೂರು 2007 ಪು.ಸಂ -20

೯) ಪ್ರಹ್ಲಾದ್ ಡಿ.ವಿ (ಸಂ) 'ತೇಜಸ್ವಿ ಲೋಕ' ಸಂಚಯ ಪ್ರಕಾಶನ ಬೆಂಗಳೂರು 2007 ಪು.ಸಂ - 89

೧೦) ಪ್ರಹ್ಲಾದ್ ಡಿ.ವಿ (ಸಂ) 'ತೇಜಸ್ವಿ ಲೋಕ' ಸಂಚಯ ಪ್ರಕಾಶನ ಬೆಂಗಳೂರು 2007 ಪು.ಸಂ -89

೧೧) ಪೂರ್ಣಚಂದ್ರ ತೇಜಸ್ವಿ ಕೆ.ಪಿ 'ಜುಗಾರಿಕ್ರಾಸ್' ಪುಸ್ತಕಪ್ರಕಾಶನ 91, 9ನೇ ಮೇನ್ ಸರಸ್ವತಿಪುರಂ,ಮೈಸೂರು 2006 ಪು.ಸಂ 188

೧೨) ಪ್ರಹ್ಲಾದ್ ಡಿ.ವಿ.(ಸಂ) 'ತೇಜಸ್ವಿಲೋಕ' ಸಂಚಯ ಪ್ರಕಾಶನ ಬೆಂಗಳೂರು 2007 ಪು.ಸಂ. 35

೧೩) ಪೂರ್ಣಚಂದ್ರ ತೇಜಸ್ವಿ ಕೆ.ಪಿ 'ಜುಗಾರಿಕ್ರಾಸ್' ಪುಸ್ತಕ ಪ್ರಕಾಶನ 91, 9 ನೇ ಮೇನ್ ಸರಸ್ವತಿಪುರಂ, ಮೈಸೂರು, 2006 ಪು.ಸಂ 74

೧೪) ಪ್ರಹ್ಲಾದ್ ಡಿ.ವಿ (ಸಂ) 'ತೇಜಸ್ವಿ ಲೋಕ' ಸಂಚಯ ಪ್ರಕಾಶನ
ಬೆಂಗಳೂರು 2007 ಪು.ಸಂ. 35

೧೫) ಪ್ರಹ್ಲಾದ್ ಡಿ.ವಿ.(ಸಂ) 'ತೇಜಸ್ವಿಲೋಕ' ಸಂಚಯ ಪ್ರಕಾಶನ
ಬೆಂಗಳೂರು 2007 ಪು.ಸಂ. 35

೧೬) ಪ್ರಹ್ಲಾದ್ ಡಿ.ವಿ. (ಸಂ) 'ತೇಜಸ್ವಿಲೋಕ' ಸಂಚಯ ಪ್ರಕಾಶನ
ಬೆಂಗಳೂರು 2007 ಪು.ಸಂ. 55

೧೭) ಪ್ರಹ್ಲಾದ್ ಡಿ.ವಿ.(ಸಂ) 'ತೇಜಸ್ವಿಲೋಕ' ಸಂಚಯ ಪ್ರಕಾಶನ
ಬೆಂಗಳೂರು 2007 ಪು.ಸಂ. 55

****************

## ಅಧ್ಯಾಯ–೪

# ಚಿದಂಬರ ರಹಸ್ಯ ಮತ್ತು ಜುಗಾರಿಕ್ರಾಸ್; ಸಾಮ್ಯ–ವೈಷಮ್ಯ ವಿಶ್ಲೇಷಣೆ

### ೪.೧. ಚಿದಂಬರ ರಹಸ್ಯ ಮತ್ತು ಜುಗಾರಿಕ್ರಾಸ್ ಕಾದಂಬರಿಯಲ್ಲಿ ಕಂಡು ಬರುವ ಪ್ರೇರಣೆ, ಪ್ರಭಾವ ಮತ್ತು ಧೋರಣೆಗಳು.

# ಅಧ್ಯಾಯ-೪
# ಚಿದಂಬರ ರಹಸ್ಯ ಮತ್ತು ಜುಗಾರಿಕ್ರಾಸ್; ಸಾಮ್ಯ-ವೈಷಮ್ಯ ವಿಶ್ಲೇಷಣೆ

ಕನ್ನಡ ಸಾಹಿತ್ಯದ ವಿಭಿನ್ನ ಕಾಲಘಟ್ಟದಲ್ಲಿ ಬರೆಯುತ್ತಾ ಬಂದ ತೇಜಸ್ವಿಯವರು, ತಮ್ಮದೇ ಆದ ಹಾದಿಯನ್ನು ನಿರ್ಮಿಸಿಕೊಂಡವರು. ಅವರ ಬರಹಗಳಲ್ಲಿ ಸಂಶೋಧನಾ ಶಕ್ತಿಯನ್ನು ಮೇಲಿಂದ ಮೇಲೆ ಗುರುತಿಸಬಹುದಾಗಿದೆ. ಈ ನಿಟ್ಟಿನಲ್ಲಿ ' ಚಿದಂಬರ ರಹಸ್ಯ' ಮತ್ತು 'ಜುಗಾರಿ ಕ್ರಾಸ್' ಎಂಬ ಎರಡು ಕಾದಂಬರಿಗಳು ಕನ್ನಡದ ಅತ್ಯುತ್ತಮ ಕಾದಂಬರಿಗಳಾಗಿವೆ.

೧) ' ಚಿದಂಬರ ರಹಸ್ಯ' ಒಂದು ಸಮಾಜದ ಆರ್ಥಿಕ, ಸಾಂಸ್ಕೃತಿಕ ಅವನತಿಯ ಕಥೆ ಎಂದು ಬಹುತೇಕ ಎಲ್ಲ ವಿಮರ್ಶಕರು ಒಪ್ಪಿಕೊಂಡಿರುವ ವಿಚಾರವಾಗಿದೆ. ವಿಮರ್ಶಕ ಟಿ.ಪಿ.ಅಶೋಕರು ಹೇಳಿರುವಂತೆ " ಕನ್ನಡದ ಯಾವ ಹೊಸ ಪೀಳಿಗೆಯ ಬರಹಗಾರನಲ್ಲೂ ಕಾಣದ ವೈವಿಧ್ಯಮಯ ನೋಟವೇ ಚಿದಂಬರ ರಹಸ್ಯವನ್ನು ಮತ್ತೆ ಮತ್ತೆ ಓದುವಂತೆ ಮಾಡುತ್ತದೆ".[೧] ಕಾದಂಬರಿಯಲ್ಲಿ ಕಂಡು ಬರುವ ಚೇಷ್ಟೆ, ಲೇವಡಿ, ಕುಹಕ, ಸಿನಿಕತನ, ಕಟಕಿ, ವ್ಯಂಗ್ಯಗಳಿಂದ ಮುಕ್ತವಾದ ಆರೋಗ್ಯಕರ ಹಾಸ್ಯ, ಲವಲವಿಕೆ, ವಿನೋದ ಈ ಮುಂತಾದುವುಗಳು ಕಾದಂಬರಿಯಲ್ಲಿ ಹೊಸಚೈತನ್ಯ, ಹೊಸಹುರುಪನ್ನು ಒದಗಿಸಿಕೊಟ್ಟಿದೆ. ಹೊಡೆದಾಟ, ಸಾವು ಬೆದರಿಕೆ, ಜಾತಿ- ವೈಷಮ್ಯ, ಸುಲಿಗೆ ಮುಂತಾದುವುಗಳನ್ನು ತೇಜಸ್ವಿಯು ಬಹಳ ಜಾಣ್ಮೆಯಿಂದ ಬಳಸಿಕೊಂಡಿದ್ದಾರೆ.

* ' ಜುಗಾರಿಕ್ರಾಸ್' ಕಾದಂಬರಿಯು ವಾಸ್ತವ ಚಿತ್ರಣವಿರುವ ಕಾದಂಬರಿ ಆಗಿದೆ. ಕೇವಲ ಇಪ್ಪತ್ನಾಲ್ಕು ಗಂಟೆಗಳ ಸಣ್ಣಕಥೆಯು ಸಹ್ಯಾದ್ರಿಯ ಕಾಡುಗಳ ತಪ್ಪಲಿನಲ್ಲಿ ನಡೆಯುತ್ತಿರುವ ಚಿತ್ರವಾಗಿದೆ. ಸ್ವತಃ ತೇಜಸ್ವಿಯವರೇ ಹೇಳಿರುವಂತೆ " ಇದು ಸಹ್ಯಾದ್ರಿಯ ಸಾಮಾಜಿಕ ಸ್ಥಿತ್ಯಂತರಗಳ ಕಾಣ್ಕೆಯನ್ನು ಒಂದೇ ಒಂದು ಮಿಂಚಿನಲ್ಲಿ ತೋರಿಸುತ್ತದೆ". ಎಂದು ಮುನ್ನುಡಿಯಲ್ಲಿ ಹೇಳಿದ ಮಾತು ಉಲ್ಲೇಖನೀಯ.

' ಜುಗಾರಿಕ್ರಾಸ್' ಮಲೆನಾಡಿನ ದಟ್ಟ ಕಾಡಿನ ನಡುವೆ ನಾಲ್ಕಾರು ದಾರಿ ಕೂಡುವ ಒಂದು ವೃತ್ತ. ದೇವಪುರ, ಮೇದರಹಳ್ಳಿ ಮೊದಲಾದ ಊರುಗಳು ಜುಗಾರಿಕ್ರಾಸ್‌ನ ಹತ್ತಿರದಾಗಿವೆ. ಆಧುನಿಕ ಪ್ರಭಾವಕ್ಕೆ ಒಳಗಾಗಿ ಜನರ ಬದುಕು ಮತ್ತು ಊರಿನ ಸ್ಥಿತಿಗಳು ಬದಲಾಗಿ ಬಿಟ್ಟಿದೆ. ಇಲ್ಲಿ ಒಂದು ರೀತಿಯಲ್ಲಿ ಜನರ ಮನೋಸ್ಥಿತಿ ಬದಲಾಗಿದೆ ಎಂದು ಹೇಳಬಹುದು. ಈ ಕಾದಂಬರಿಯಲ್ಲಿ ಮುಖ್ಯವಾಗಿ ಏಲಕ್ಕಿ ವ್ಯಾಪಾರ ಕೇಂದ್ರ ಬಿಂದುವಾಗಿದೆ. ಇದು ಅಪ್ಪಟ ವಾಸ್ತವವಾದಿ ಕಾದಂಬರಿ. ಕಳ್ಳರ ಬೆನ್ನಟ್ಟುವ ಪೋಲೀಸರು, ಪತ್ತೇದಾರರು, ಜೂಜುಕೋರರು, ದುಷ್ಟರು, ಮಾಫಿಯಾ ಗ್ಯಾಂಗ್‌ನವರು, ವ್ಯಾಪಾರಿಗಳು, ರೈತರು ಮತ್ತು ವ್ಯವಸ್ಥೆಯ ನಡುವಿನ ಘರ್ಷಣೆ ಎಲ್ಲವೂ ಇದೆಯಾದರೂ, ಒಂದು

ಪರಿಸರದ ವರ್ತಮಾನದ ಸ್ಥಿತಿಯನ್ನು ಚಿತ್ರಿಸುವುದು ಕಾದಂಬರಿಯ ಉದ್ದೇಶವಾಗಿದೆ.

೨) ' ಚಿದಂಬರ ರಹಸ್ಯ' ಕಾದಂಬರಿಯು ಕೆಸರೂರಿನ ಅವನತಿಯನ್ನು ಚಿತ್ರಿಸಿದೆ. ಇಲ್ಲಿ ಕೆಸರೂರು ಒಂದು ಸಂಕೇತ ಎಂಬಂತೆ ಕಂಡುಬಂದಿದೆ. ಅದು ವಿಶ್ವದ ಯಾವುದೇ ಒಂದು ಭಾಗ ಕೂಡ ಆಗಬಹುದು. " ಕಾದಂಬರಿ, ವಿಜ್ಞಾನ, ತತ್ತ್ವಜ್ಞಾನ ಸಮಾಜದ ಮೂಢನಂಬಿಕೆಗಳು, ರಾಜಕೀಯಸಿದ್ಧಾಂತ ಚಟುವಟಿಕೆಗಳು ಇವು ತಮ್ಮ ತಮ್ಮ ಹಾದಿಯಲ್ಲಿ ರಹಸ್ಯವನ್ನು ಅರಿಯುವ, ಸತ್ಯವನ್ನು ಅನ್ವೇಷಿಸುವ ಕ್ರಿಯೆಯಲ್ಲಿ ತೊಡಗುತ್ತದೆ"[೨] ಎಂದು ಎಂ.ಎಚ್ ಕೃಷ್ಣಯ್ಯ ಅಭಿಪ್ರಾಯ ಪಡುತ್ತಾರೆ. ಕಾದಂಬರಿಯಲ್ಲಿ ಅಡಕವಾಗಿರುವ ವಿಷಯ ಸಂಪತ್ತು ಅದು ಭಾವುಕತೆಗೆ ಅಥವಾ ಸಿನಿಕತೆಗೆ ಇಳಿಯದಂತೆ ಆರೋಗ್ಯಕರವಾದ ಪ್ರತಿರೋಧಗಳನ್ನು ಒಡ್ಡಿರುವಂತೆ ಕಂಡು ಬರುವ ಈ ವಿನೋದವು ಲೇಖಕರು ಏಕಮುಖವಾಗದಂತೆಯೂ ತಡೆಯುತ್ತದೆ. ಗಾಂಭೀರ್ಯ ಮತ್ತು ವಿನೋದಗಳನ್ನು ತೂಗಿಸಿಕೊಂಡು ಹೋಗಬಲ್ಲ ಸಾಮರ್ಥ್ಯವು ತೇಜಸ್ವಿಯವರಿಗೆ ಹಲವು ಧೋರಣೆ-ದೃಷ್ಟಿಕೋನಗಳನ್ನು ತಮ್ಮ ಹಿಡಿತದಲ್ಲಿ ಇರಿಸಿಕೊಳ್ಳಲು ಸಾಧ್ಯವಾಗಿದೆ.

* 'ಜುಗಾರಿಕ್ರಾಸ್ ' ಕಾದಂಬರಿಯಲ್ಲಿ ಮುಖ್ಯವಾಗಿ ಮುಗ್ಧ ಜನರ ಮೇಲೆ, ಪ್ರಾಮಾಣಿಕರ ಮೇಲೆ ಆಧುನಿಕ ರಾಕ್ಷಸೀ ಪ್ರವೃತ್ತಿ ನಡೆಸುವವರ ಹಲ್ಲೆಯನ್ನು ಕಾದಂಬರಿಕಾರರು ಶೋಧಿಸ ಹೋಗುತ್ತಾರೆ. ಸುರೇಶನು ಕನ್ನಡ ಸಾಹಿತ್ಯವನ್ನು ಓದಲು ಮೈಸೂರಿಗೆ ಬಂದಿರುತ್ತಾನೆ. ರಬ್ಬರ್ ತೋಟಕ್ಕಾಗಿ ಕಾಡನ್ನು ಕ್ರಯಕ್ಕೆ ಕೊಳ್ಳುವಾಗ ಅದು ದೊಡ್ಡ ಪ್ರಮಾದಕ್ಕೆ ಕಾರಣವಾಗುತ್ತದೆ. ನಂತರ ಕುಮರಿ ಹತ್ತಿರ ಏಲಕ್ಕಿ ಬೆಳೆಯಲು ನಿಲ್ಲುತ್ತಾನೆ. ಈ ನಿರ್ಧಾರಕ್ಕೆ ಅವನ ಹೆಂಡತಿ ಗೌರಿಯು ಬೆಂಬಲ ನೀಡುತ್ತಾಳೆ. ಸುರೇಶನ ಕನಸುಗಾರಿಕೆಗೆ, ಹುಚ್ಚಾಟಕ್ಕೆ ಗೌರಿಯು ಮನ ಸೋತು ಆತನನ್ನು ವರಿಸಿರುತ್ತಾಳೆ. ಕಾದಂಬರಿಯಲ್ಲಿ ಏಲಕ್ಕಿ ಬೆಳೆಯು ಕೇಂದ್ರ ಬಿಂದು ಎಂಬುವುದನ್ನು ಮೊದಲೇ ಸೂಚಿಸಿದೆ. ಈ ನಿಟ್ಟಿನಲ್ಲಿ ಅವರು ಏಲಕ್ಕಿ ಬೆಳೆಗೆ ಒಳ್ಳೆಯ ರೇಟು ಸಿಕ್ಕಿ, ಬೆಳೆಯು ಚೆನ್ನಾಗಿ ಬಂದಿದ್ದರಿಂದ ಮೊದಲು ಅವರು ಜುಗಾರಿಕ್ರಾಸ್‌ನಿಂದ ದೇವಪುರಕ್ಕೆ ಪ್ರಯಾಣ ಬೆಳೆಸುವುದಾಗಿದೆ. ಒಟ್ಟಿನಲ್ಲಿ ಕಾದಂಬರಿಯು ಜುಗಾರಿಕ್ರಾಸ್‌ನ ಜಾಲದಲ್ಲಿ ಸಿಕ್ಕಿ ಬಿದ್ದ ಸುರೇಶ- ಗೌರಿಯರು ಅದರಿಂದ ಪಾರಾಗಲು ಪ್ರಯತ್ನಿಸುತ್ತಾರೆ. ಅವರ ಆ ಒಂದು ಪ್ರಯತ್ನವೇ ಕಾದಂಬರಿಯ ಕಥಾ ವಸ್ತು ಆಗಿರುತ್ತದೆ.

೩) ' ಚಿದಂಬರ ರಹಸ್ಯ' ಕಾದಂಬರಿಯಲ್ಲಿ ಕೆಸರೂರಿನ ಏಲಕ್ಕಿ ಗುಡ್ಡದ ಸುತ್ತ ಕಾದಂಬರಿಯ ಕ್ರಿಯೆಗಳು ಸಾಗುತ್ತದೆ. ಏಲಕ್ಕಿಗೆ ರೋಗ ತಗುಲಿದಂತೆ, ಕೆಸರೂರಿನ ಸಂಸ್ಕೃತಿಗೂ ರೋಗ ತಗಲುತ್ತದೆ. ಇಲ್ಲಿ ಏಲಕ್ಕಿ ಬೆಳೆಯು ಪ್ರಧಾನವಾದ ವಸ್ತು. ಅದಕ್ಕೆ ಪೂರಕ ಎಂಬಂತೆ ಕೆಸರೂರಿನ ಸಮಾಜದಲ್ಲಿರುವ ಸಂಸ್ಕೃತಿಯು ಹದಗೆಡುತ್ತದೆ. ಹಾಗೆಯೇ ಮನುಷ್ಯನ ಕಪಟ, ಸ್ವಾರ್ಥ, ದಬ್ಬಾಳಿಕೆಯಿಂದ ಅಲ್ಲಿಯ ಪರಿಸರವು ಕೂಡ ಅವನತಿಯನ್ನು ಹೊಂದುತ್ತದೆ. ಕಾಡುಗಳು ನಾಡುಗಳಾಗುತ್ತವೆ.

ಡಾ॥ ಜೋಗಿಹಾಳರು ಅಧಿಕ ಇಳುವರಿ ನೀಡುವ ಏಲಕ್ಕಿಯ ತಾಯಿಗಿಡದ

ಅನ್ವೇಷಣೆ ಮಾಡಿದ್ದನ್ನು ಗಮನಿಸಿದಾಗ ವೈಜ್ಞಾನಿಕ ಮನೋಭಾವನೆಯು ಬೆಳೆಯುವುದನ್ನು ಕಾಣುತ್ತೇವೆ. ಇಂತಹ ಏಲಕ್ಕಿ ಗಿಡಕ್ಕೆ ವೈರಥ್ ತಗುಲದು. ಈ ಗಿಡದ ಕುರಿತು ಟಿಪ್ಪಣಿಯ ರೂಪದಲ್ಲಿ ಪ್ರಸ್ತಾಪಿಸಿರುತ್ತಾರೆ. ಜೋಗಿಹಾಳರ ಕೊಲೆಯಿಂದಾಗಿ ತಾವು ಕಂಡು ಹಿಡಿದ ಗಿಡಕ್ಕಾಗಿ ಹುಡುಕಾಟ ಮುಂದುವರೆಯುತ್ತದೆ. ಇಲ್ಲೆಲ್ಲ ಗಮನಿಸಿದಾಗ ಜನ ಸಾಮಾನ್ಯರು ವಿಸ್ಮಯ ಜಗತ್ತಿಗೆ ಒಳಗಾಗಿ ಒಂದು ರೀತಿಯ ಅನುಭವವನ್ನು ಹೊಂದುತ್ತಾರೆ. ಮತ್ತು ಕ್ರಿಯಾಶೀಲತೆಯನ್ನು ಮೈಗೂಡಿಸಿಕೊಳ್ಳುತ್ತಾರೆ. ಅಧಿಕ ಇಳುವರಿ ನೀಡುವ ಏಲಕ್ಕಿಯ ತಾಯಿಗಿಡದ ಅನ್ವೇಷಣೆ ಡಾ। ಜೋಗಿಹಾಳರು ಮಾಡಿದರೂ ಕೂಡ ಅವರ ಕೊಲೆಯಿಂದಾಗಿ ಪರಿಪೂರ್ಣತೆಯನ್ನು ಹೊಂದಲು ಆಗುತ್ತಿಲ್ಲ.

* ಜುಗಾರಿಕ್ರಾಸ್ ಕಾದಂಬರಿಯಲ್ಲಿ ಆಧುನಿಕತೆಯ ಪ್ರಭಾವದಿಂದಾಗಿ ಈ ಒಂದು ನೆಲೆಯು ಜಗತ್ತಿನ ಇತರ ಭಾಗಗಳಿಗೆ ಮಾದರಿ ರೂಪವಾಗುತ್ತದೆ. ಇಲ್ಲಿ ಬರುವ ಪಾತ್ರಗಳು ಸಿದ್ದಪ್ಪ, ಮೂಕಿದ್ಯಾವಮ್ಮನ ಗಂಡ, ಕುಟ್ಟಿ, ರಾಮಾನುಜ, ಬೀಡಸ್ಟಾಲ್ ಶೇಷಪ್ಪ, ಸುರೇಶನ ಗೆಳೆಯ ರಾಜಪ್ಪ ಮತ್ತು ಪ್ರಾಸಂಗಿಕವಾಗಿ ಬರುವ ಪಾತ್ರ ಗಂಗೂಲಿ. ಇವೆಲ್ಲ ಪಾತ್ರಗಳು ಒಂದಕ್ಕೊಂದು ಪೂರಕ ರೂಪದಲ್ಲಿ ಕಾರ್ಯನಿರ್ವಹಿಸಿದರೂ ಅವು ನಿರ್ವಹಿಸುವ ಕಾರ್ಯ ಚಟುವಟಿಕೆಗಳು ವಾಸ್ತವವಾದಿ ನೆಲೆಯಿಂದ ಭಿನ್ನ ರೂಪದಲ್ಲಿರುತ್ತದೆ.

ಇಲ್ಲಿಯ ಪಾತ್ರಗಳು ಆಧುನಿಕತೆಯ ಪ್ರಕ್ರಿಯೆಯಲ್ಲಿ ಮುಂದುವರಿಯುತ್ತದೆ. ಗೌರಿಯು ಏಲಕ್ಕಿಯ ಹಣದಿಂದ ರಾಜಪ್ಪನ ಬಳಿ ಇದ್ದ ಗುರುರಾಜ ಪಂಡಿತನ ದ್ವಿಸಂಧಾನ ಕಾವ್ಯದ ಹಸ್ತಪ್ರತಿಯನ್ನು ಕೊಂಡುಕೊಳ್ಳುತ್ತಾಳೆ. ಹಸ್ತಪ್ರತಿಯು ಆ ಪರಿಸರದಲ್ಲಿ ಸಿಗುವ ' ಕೆಂಪುರತ್ನ' ದ ಬಗೆಗೆ ಮಾಹಿತಿ ಇದೆ ಎಂಬ ಕಾರಣದಿಂದ ಒಂದೂವರೆ ಲಕ್ಷ ತೆತ್ತು ಕೊಳ್ಳುತ್ತಾಳೆ. ಈ ವಿಚಾರವನ್ನು ಗಮನಿಸಿದಾಗ ತಾವು ಕಷ್ಟ ಪಟ್ಟು ಸಂಪಾದಿಸಿದ ಹಣದಿಂದ ಮತ್ತಷ್ಟು ಹಣವನ್ನು ಸಂಪಾದಿಸಲು ಪ್ರಯತ್ನಿಸುವುದು ಒಂದು ಆದರೆ, ಎರಡನೆಯದಾಗಿ ಯಾವುದೇ ಉಪಾಯದಿಂದ ಅಥವಾ ಸಂಚಿನಿಂದ ದಿಢೀರ್ ಶ್ರೀಮಂತಿಕೆಯನ್ನು ಜುಗಾರಿಕ್ರಾಸ್‌ನ ಜನರು ಮತ್ತು ಸುತ್ತಮುತ್ತಲಿನ ಪ್ರದೇಶದ ಜನರು ಬಯಸುವುದಾಗಿದೆ. ಕಾದಂಬರಿಯ ಕಥಾವಸ್ತುವು ವಿವಿಧ ಆಯಾಮವನ್ನು ಹೊಂದುತ್ತಾ, ಆಧುನೀಕರಣಕ್ಕೆ ಒಳಗಾಗುವುದನ್ನು ಕಾಣುತ್ತೇವೆ.

೪) ಚಿದಂಬರ ರಹಸ್ಯ – ಕಾದಂಬರಿಯಲ್ಲಿ ' ಕೆಸರೂರು' ದೊಂಬಿಯ ತಾಣವಾಗಿದೆ. ಕೆಸರೂರಿನಲ್ಲಿ ದೊಂಬಿಯ ಜೊತೆಯಲ್ಲೇ ಕೊಲೆಗಳು ಪ್ರತಿ ಕೊಲೆಗಳು ನಡೆದಿರುತ್ತದೆ. ಸಮಾಜವು ಅಶಾಂತಿಯ ತಾಣವಾಗುತ್ತದೆ. ಒಂದು ಕಾಲಘಟ್ಟದಲ್ಲಿ ಸಾಮಾಜಿಕ ಸ್ಥಿತ್ಯಂತರವನ್ನು ಕಾಯ್ದುಕೊಂಡಿದ್ದ ಊರು ಕ್ರಮೇಣ ಆಧುನೀಕರಣಕ್ಕೆ ಕಾಲಿಡುತ್ತಿದ್ದಂತೆ ಅನೇಕ ರೀತಿಯ ಅವ್ಯವಹಾರಗಳು ಜೊತೆಯಾಗಿಯೇ ನಡೆಯುತ್ತದೆ. ಇಲ್ಲಿ ಲೇಖಕರು ಕಥೆಯ ವಿವಿಧ ಆಯಾಮವನ್ನು ವಿಭಿನ್ನ ಪಾತ್ರಗಳ ನಿರೂಪಣಾ ಶೈಲಿಯಿಂದ ಕಟ್ಟಿ ಕೊಡುತ್ತಾರೆ. ಅಂತಹ ಒಂದು ಸನ್ನಿವೇಶ, ಸಂದರ್ಭವನ್ನು

ಗಮನಿಸಬಹುದಾಗಿದೆ.

ಕೆಸರೂರಿಗೆ ಬೆಂಕಿ ಬಿದ್ದಾಗ ರಫಿ ಮತ್ತು ಜಯಂತಿ ಪಾರಾಗಬೇಕೆಂದು ತಪ್ಪಿಸಿಕೊಳ್ಳುವಾಗ ಅವರಿಗೆ ಕೆಸರೂರಿನ ಹೈಬ್ರಿಡ್ ಏಲಕ್ಕಿಗಿಡ ಬೆಂಕಿಗೆ ನಾಶವಾಗಿ ಹೋಗುತ್ತದೋ ಎಂಬ ಭಯ ಒಂದು ಕಡೆ ಇದೆ. ಆದರೂ ರಫಿ ಮತ್ತು ಜಯಂತಿ ಕಷ್ಟದಲ್ಲಿ ದಟ್ಟ ಹೊಗೆಯಿಂದ ದೂರ ಬೆಟ್ಟದ ತುದಿ ತಲುಪುತ್ತಾರೆ. ಇವರಿಬ್ಬರೂ ಬೇರೆ ಬೇರೆ ಜಾತಿ ಧರ್ಮದವರು ಆಗಿರುತ್ತಾರೆ. ಲಾಂಟಾನಾ ಮುಳ್ಳಿನಿಂದಾಗಿ ಬಟ್ಟೆ ಚಿಂದಿಯಾಗಿ ಬೆತ್ತಲೆಯಾಗಿ ಅವರು ಬೆಟ್ಟವೇರುತ್ತಾರೆ. ಆಗ ಜಯಂತಿ( ಕೃಷ್ಣೇಗೌಡನ ಮಗಳು) ಹೇಳುತ್ತಾಳೆ. " ನೋಡು ಜೇನುಕಲ್ಲು ಗುಡ್ಡದ ತುದಿ ಚೆನ್ನಾಗಿ ಕಾಣಿಸ್ತದೆ. ಕೆಸರೂರಿನ ಜನ ಈಗಲೂ ಎಲ್ಲಾ ಅಲ್ಲಿಗೆ ಓಡಿದರೆ ಬೆಂಕಿಯಿಂದ ತಪ್ಪಿಸಿಕೊಳ್ಳಬಹುದು". ಅದಕ್ಕೆ ಪ್ರೇಮಿ ರಫಿಯು " ನಮಗೆ ಕಾಣುತ್ತದೆ ಅವರಿಗೆ ಕಾಣ್ತದ? ಈ ಹೊಗೇಲಿ"[೩]. ಎನ್ನುವ ಮಾತು ಔಚಿತ್ಯ ಪೂರ್ಣವಾದುದಾಗಿದೆ. –( ಪು.ಸಂ ೨೧೭ ರಲ್ಲಿ )

ಕೆಸರೂರಿಗೆ ಬೆಂಕಿ ಬೀಳುವ ಸಂದರ್ಭದಿಂದ ಹಿಡಿದು ಆ ಪರಿಸರದಲ್ಲಿ ಆದ ಬದಲಾವಣೆಯನ್ನು ಗಮನಿಸಿದಾಗ ಘಟನೆಯು ಅಕಸ್ಮಿಕ ಎಂಬಂತೆ ನಮಗೆ ಭಾಸವಾಗುತ್ತದೆ ಮತ್ತು ಇದರಲ್ಲಿ ಧ್ವನಿ ಇದೆ. ಏಲಕ್ಕಿ ಗಿಡ ಬೆಂಕಿಗೆ ನಾಶವಾಗಿ ಹೋಗುತ್ತದೋ ಎಂಬ ಆತಂಕದಿಂದಲೋ ಅಥವಾ ತಮ್ಮ ಸ್ವ–ಇಚ್ಛೆ, ಸ್ವ–ನಿರ್ಧಾರದಿಂದಲೋ ಅವರು ದೂರದ ಬೆಟ್ಟದ ತುದಿ ತಲುಪುತ್ತಾರೆ. ಈ ಸಂದರ್ಭದಲ್ಲಿ ಅವರ ಬಟ್ಟೆಯು ಲಾಂಟಾನಾ ಮುಳ್ಳಿನಿಂದ ಚಿಂದಿಯಾಗಿ, ಬೆತ್ತಲೆಯಾಗಿ ಬೆಟ್ಟವೇರುತ್ತಾರೆ. ಇದಕ್ಕೆ ಪರೋಕ್ಷ ಎಂಬಂತೆ ಜಯಂತಿಯು ಹೇಳುವ ಮಾತಿಗೆ, ಪ್ರೇಮಿ ರಫಿಯು " ನಮಗೆ ಕಾಣುತ್ತದೆ. ಅವರಿಗೆ ಕಾಣ್ತದ? ಈ ಹೊಗೇಲಿ"[೪] ಎಂಬ ಇವರಿಬ್ಬರ ಮಾತಿನಿಂದ ಅವರ ಮನಸ್ಸಿನ ಬಯಕೆ ಅಥವಾ ಆಸೆ, ಆಕಾಂಕ್ಷೆಯನ್ನು ತಿಳಿಯಲು ಸಾಧ್ಯವಾಗಿದೆ ಮತ್ತು ಇಲ್ಲಿ ತೇಜಸ್ವಿಯು ಬಳಸಿದ ಜಾಣ್ಮೆ ಅಥವಾ ಕೌಶಲ್ಯವನ್ನು ಗುರುತಿಸಬಹುದಾಗಿದೆ.

* ಜುಗಾರಿಕ್ರಾಸ್ ಕಾದಂಬರಿಯಲ್ಲಿ ಪ್ರಕೃತಿಯ ವಿಸ್ಮಯ ಅನುಭವಗಳನ್ನು ತಮ್ಮದೇ ಆದ ಹಾಸ್ಯ ವಿನೋದ ಶೈಲಿಯಿಂದ ನಿರೂಪಿಸುತ್ತಾ ಹೋಗುತ್ತಾರೆ. ಒಂದೇ ದಿನದಲ್ಲಿ ಬಸ್ ಪ್ರಯಾಣ, ಏಲಕ್ಕಿ ವ್ಯಾಪಾರ, ರೈಲು ಪ್ರಯಾಣ, ಸುರಂಗದಲ್ಲಿ ಹೋಗುವುದು, ಸೇತುವೆ ಮೇಲೆ ನಡೆಯುವಾಗ ಕಾಡಾನೆಗಳನ್ನು ನೋಡುವುದು ಇನ್ನೂ ಮುಂತಾದ ಅನೇಕ ರೀತಿಯ ವಿಚಾರಗಳನ್ನು ತಿಳಿಸುತ್ತಾರೆ. ಮೊದಲೇ ತಿಳಿಸಿದಂತೆ ಕಥೆಯು ಇಪ್ಪತ್ನಾಲ್ಕು ಗಂಟೆಗಳ ಸಣ್ಣ ಕಥೆ ಆಗಿದೆ. ಕಥೆಯು ನಿರಂತರವಾಗಿ ಮುಂದುವರಿದು ಪ್ರಕೃತಿಯ ದೃಶ್ಯಗಳನ್ನು ಕಣ್ಣಿಗೆ ಕಟ್ಟುವಂತೆ ನಿರೂಪಿಸುತ್ತಾರೆ. ಇಂತಹ ಕಥೆಯ ಹಂದರದಲ್ಲಿ ಅಪರಾಧಿಗಳ ಒಂದು ಜಾಲವನ್ನು ಕಂಡು ಹಿಡಿಯುವ ಪ್ರಯತ್ನವೂ ಇದೆ. ಈ ಪ್ರಯತ್ನದಲ್ಲಿ ಪತ್ತೇದಾರಿಯ ಶೈಲಿಯ ಸ್ವರೂಪವನ್ನು ಕಾಣಲು ಸಾಧ್ಯವಿದೆ. ರಾಜಪ್ಪ ಹಳೆಯ ಕಾವ್ಯವೊಂದನ್ನು ಸುರೇಶನಿಗೆ ತೋರಿಸಿ ಅಲ್ಲಿ ಹೇಳಿರುವಂತೆ ಸಂಶೋಧನೆಗೆ ಸುರೇಶ ಮುಂದಾಗುವಂತೆ ಮಾಡುತ್ತಾನೆ. ಇಲ್ಲಿ ರಾಜಪ್ಪನೇ ಪತ್ತೇದಾರ

ಆಗಿರುತ್ತಾನೆ. ಈತನು ಜೀವನಲಾಲ್ ಮೊದಲಾದ ಅಪರಾಧಿಗಳನ್ನು ಪತ್ತೆ ಮಾಡಲು ಬಂದಿರುತ್ತಾನೆ. ಜೀವನಲಾಲ್ ಒಬ್ಬ ಕಳ್ಳನೋಟು ದಂಧೆಯವನು. ಇವನಿಗೆ ಇವನದೇ ಆದ ಗ್ಯಾಂಗ್ ಇದ್ದು, ದೇಶಾಂತರದ ಸಂಬಂಧಗಳಿವೆ. (ನೋಡಿ ಪು.ಸಂ. ೮೩ ರಲ್ಲಿ) ಈ ಎಲ್ಲಾ ಅಂಶಗಳನ್ನು ಗಮನಿಸಿದಾಗ ಕಾದಂಬರಿಯ ಉದ್ದಕ್ಕೂ ಒಂದು ರೀತಿಯ ಪತ್ತೇದಾರಿ ಶೈಲಿಯ ಸ್ವರೂಪವನ್ನು ಕಾಣುತ್ತೇವೆ.

೫) 'ಚಿದಂಬರ ರಹಸ್ಯ' ದಲ್ಲಿ ಜಾತಿಯು ವಿನಾಶವಾಯಿತೆಂದು ' ಕೆಸರೂರಿಗೆ' ಸುಲೇಮಾನ್ ಕಡೆಯವರು ಬೆಂಕಿ ಹಚ್ಚುತ್ತಾರೆ ಮತ್ತು ಸುಲೇಮಾನ್ ಕಾಡಿಗೆ ಕೂಡ ಬೆಂಕಿ ಹಚ್ಚುತ್ತಾನೆ. ಕೃಷ್ಣೇಗೌಡ ಮತ್ತು ಸುಲೇಮಾನ್ ಇವರಿಬ್ಬರು ಪ್ರತಿಸ್ಪರ್ಧಿಗಳು. ಇವರ ಆಕಾಂಕ್ಷೆಯೇ ಇಡೀ ಕೆಸರೂರನ್ನು ಬಲಿ ಕೊಡಬೇಕಾಗುತ್ತದೆ.

ಕಾದಂಬರಿಯಲ್ಲಿ ಕೆಸರೂರಿನ ಸಾಂಸ್ಕೃತಿಕ ಅಧಃಪತನವಾಗಿದೆ ಎಂಬುವುದನ್ನು ವಿಜ್ಞಾನಿ ಪಾಟೀಲರ ಮಾತಿನಿಂದ ತಿಳಿಯಬಹುದು.

" ಏಲಕ್ಕಿ ಸುಡೋ ಮೊದಲು ಕೆಸರೂರಿನ ಸಮಾಜ ಸುಡಬೇಕು".[೫] ಎನ್ನುತ್ತಾರೆ. (ಪು.ಸಂ. ೫೩ರಲ್ಲಿ) ಕೆಸರೂರು ಎಂಬುವುದು ಮೊದಲು ಇದ್ದ ಊರಿನ ಹಾಗೆ ಪ್ರಸ್ತುತ ಸಂದರ್ಭದಲ್ಲಿ ಇಲ್ಲ. ಒಂದು ರೀತಿಯ ಗಲಭೆ, ದೊಂಬಿಯ ತಾಣವಾಗಿದೆ. ಕೊಲೆ–ಪ್ರತಿಕೊಲೆಗಳು ನಡೆಯುತ್ತಿರುತ್ತದೆ. ಸಮಾಜವು ತನ್ನ ನೈಜತೆಯ ಸ್ವರೂಪವನ್ನು ಕಳೆದುಕೊಂಡಿದೆ.

ಸಾಹಿತಿ ಜಯರಾಮನು ಹೇಳುವ ಮಾತು ಇನ್ನೂ ಸ್ಪಷ್ಟತೆಯನ್ನು ಒದಗಿಸುತ್ತದೆ. " ಸತ್ಯಾನ್ವೇಷಣೆ ನನ್ನ ಉದ್ದೇಶ. ನಿಜವಾದ ಅರ್ಥದಲ್ಲಿ ಚಿದಂಬರ ರಹಸ್ಯವನ್ನು ಭೇದಿಸುವುದು".[೬] ( ಪು.ಸಂ.೧೧೬) ಎಂಬ ಈ ಮಾತು ಕೆಸರೂರಿನ ಹಿಂದಿರುವ ಸತ್ಯವನ್ನು ಹುಡುಕುವುದಕ್ಕೆ ಹೊರಟಿದೆ ಎಂಬುವುದನ್ನು ನಮಗೆ ಮನದಟ್ಟು ಮಾಡುತ್ತದೆ.

ತೇಜಸ್ವಿಯು ಕಾದಂಬರಿಯಲ್ಲಿ ಸಮಾಜವು ಅಧೋಗತಿಗೆ ಇಳಿಯುವುದನ್ನು ತಿಳಿಸುತ್ತಾರೆ. ಆಧುನಿಕತೆ ಹೊಂದಿದ ಹಾಗೆ ಸಮಾಜದಲ್ಲಿ ಆಗುತ್ತಿರುವ ಬದಲಾವಣೆಯು ಅನೇಕ ರೀತಿಯ ಪ್ರತಿರೋಧಗಳನ್ನು ಒಡ್ಡುತ್ತ ಮುಂದುವರಿಯುತ್ತದೆ. ಇಂತಹ ಸಂದರ್ಭದಲ್ಲಿ ಸಮಾಜದಲ್ಲಿ ಅನೇಕ ರೀತಿಯ ಅವ್ಯವಹಾರಗಳು, ಅನೈತಿಕತೆ, ಸಮಾಜಘಾತುಕ ಕಾರ್ಯ ಚಟುವಟಿಕೆಗಳು ಉಂಟಾಗುತ್ತದೆ. ಇವೆಲ್ಲಾವನ್ನು ತೇಜಸ್ವಿ ಅನೇಕ ರೀತಿಯ ಕಾರ್ಯಚಟುವಟಿಕೆಗಳ ಮೂಲಕ ತಿಳಿಯಪಡಿಸುತ್ತಾರೆ.

* ಜುಗಾರಿಕ್ರಾಸ್‌ನಲ್ಲಿ ನಡೆಯುತ್ತಿರುವ ಅವ್ಯವಹಾರಗಳು ಹಲವಾರು. ಅವುಗಳಲ್ಲಿ ಗಂಧದ ಕಳ್ಳ ಸಾಗಾಣಿಕೆ, ಕಳ್ಳಭಟ್ಟಿ, ಮಾದಕ ವಸ್ತು ಸಾಗಾಣಿಕೆ ಇತ್ಯಾದಿ ಮುಖ್ಯವಾಗಿದೆ. ಹಾಗೆಯೇ ಆಧುನೀಕರಣ ಹೊಂದಿದ ಹಾಗೆ ಪ್ಲಾಸ್ಟಿಕ್ ಯುಗ ಕಾಲಿಟ್ಟಿದೆ. ಇದರಿಂದ ಪರಿಸರದಲ್ಲಿಯೂ ಏರುಪೇರಾಗಿ ಪರಿಸರ ಮಾಲಿನ್ಯ ಉಂಟಾಗಿದೆ. ಜುಗಾರಿಕ್ರಾಸ್ ಇಲ್ಲಿ ಒಂದು ಸಂಕೇತ ಮಾತ್ರ ಆಗಿರದೆ, ಇದು ವಿಶ್ವಸಂಸ್ಥೆಯ ಮಾದಕ ವಸ್ತು ಜಾಲದ ನಕ್ಷೆಯಲ್ಲಿ ಗುರುತಿಸಿಕೊಳ್ಳುತ್ತದೆ. ಅಲ್ಲದೆ ಇದು ಜಾಗತೀಕರಣದ ಪ್ರಭಾವಕ್ಕೆ

ಕೂಡ ಒಳಗಾಗಿದೆ.

ತೇಜಸ್ವಿಯವರು ಜುಗಾರಿಕ್ರಾಸ್‌ನ್ನು ಸಂಕೇತವಾಗಿ ಬಳಸಿ, ಅಲ್ಲಿನ ಸಮಾಜವನ್ನು, ಪರಿಸರವನ್ನು ವಿಶ್ವವ್ಯಾಪ್ತಿಯಾಗಿ ಅಥವಾ ಜಾಗತೀಕರಣದ ನೆಲೆಯಲ್ಲಿ ತಮ್ಮ ವಿಚಾರವನ್ನು ವ್ಯಕ್ತಪಡಿಸುತ್ತಾರೆ. ಜುಗಾರಿಕ್ರಾಸ್ ಎಂಬುವುದು ಅದು ಕೇವಲ ಅಲ್ಲಿನ ಪರಿಸರಕ್ಕೆ ಮಾತ್ರ ಸೀಮಿತವಾಗಿಲ್ಲ. ಅದು ವಿಶ್ವವ್ಯಾಪ್ತಿಯಾಗಿದೆ. ಜಾಗತೀಕರಣ ಎಂಬುವುದು ಊರನ್ನು ಮತ್ತು ಊರಿನ ಜನರನ್ನು ಹೇಗೆ ಬಲಿ ತೆಗೆದುಕೊಂಡಿತು ಎಂಬ ವಿಚಾರವನ್ನು ತೇಜಸ್ವಿಯವರು ಸೂಚ್ಯವಾಗಿ ತಿಳಿಸಿದ್ದಾರೆ. ಪ್ರಕೃತಿಯ ಸೌಂದರ್ಯವನ್ನು ಅನುಭವಿಸಿ, ವಾಸ್ತವತೆಯನ್ನು ನಮ್ಮ ಮುಂದೆ ಇಟ್ಟಿದ್ದಾರೆ. ಜುಗಾರಿಕ್ರಾಸ್‌ನ ಜನರು ಮತ್ತು ನಿಸರ್ಗ ಇವು ಒಂದಕ್ಕೊಂದು ಸಂಬಂಧ ಹೊಂದಿ ಕಥೆಯು ಮುಂದುವರಿಯುತ್ತದೆ. ಈ ಸಂಬಂಧವು ಹೊಸ ಸಾಧ್ಯತೆ ಮತ್ತು ಸೂಕ್ಷ್ಮತೆಯನ್ನು ಜನರ ಮುಂದೆ ಇಟ್ಟಿದೆ.

೬) ಚಿದಂಬರ ರಹಸ್ಯ ಕಾದಂಬರಿಯು ನಮಗೆ ಹೊಸ ಅನುಭವದ ಆಯಾಮವನ್ನು ಮತ್ತು ಚಿಂತನೆಗೆ ಅವಕಾಶವನ್ನು ಉಂಟು ಮಾಡುತ್ತದೆ. ತೇಜಸ್ವಿಯು ತನ್ನ ಜೀವನಾನುಭವವನ್ನು ಕಾದಂಬರಿಯ ಎಲ್ಲಾ ಸ್ತರಗಳಲ್ಲಿ ವಿವರಿಸುತ್ತಾರೆ. ಇಲ್ಲಿ ಕೆಸರೂರಿನ ಅವನತಿಯನ್ನು ಸಾಂಕೇತಿಕವಾಗಿ ಚಿತ್ರಿಸಿದ್ದಾರೆ. ಅವನತಿಯನ್ನು ಚಿತ್ರಿಸುವಾಗ ತಾತ್ವಿಕ ಪ್ರಶ್ನೆಗಳು ಮಹತ್ತ್ವವನ್ನು ಪಡೆದಿದೆ. ಕಾದಂಬರಿಯಲ್ಲಿ ಅಂತರ್ಗತವಾಗಿರುವ ವಿಷಾದವು ನಮ್ಮ ಅರಿವಿಗೆ ಬರುತ್ತದೆ. ಕೆಸರೂರಿನ ಅವನತಿಯನ್ನು ಚಿತ್ರಿಸುವ ಕಾದಂಬರಿಯಾಗಿದ್ದರೂ, ಆ ಮೂಲಕ ನಮಗೆ ಅನೇಕ ರೀತಿಯ ವೈಚಾರಿಕತೆಯನ್ನು ಉಂಟು ಮಾಡುತ್ತದೆ. ಗಾಂಭೀರ್ಯತೆ ಮತ್ತು ವಿನೋದದ ಶೈಲಿಯು ಕಾದಂಬರಿಯನ್ನು ನಿರಂತರವಾಗಿ ಓದುವಂತೆ ಮತ್ತು ಜೊತೆಯಾಗಿ ತೂಗಿಸಿಕೊಂಡು ಹೋಗಲು ಅನುಕೂಲವಾಗಿದೆ.

ಕೆಸರೂರಿನ ಜನರ ಬದುಕಿನ ಅವನತಿಯ ಜೊತೆಯಲ್ಲಿಯೇ ಅಲ್ಲಿನ ಜನರ ಬದುಕನ್ನು ಹೇಗೆ ಸುಧಾರಿಸಿಕೊಂಡು ಹೋಗಬಹುದು ಎಂಬ ಸಾಧ್ಯತೆಗಳನ್ನು ನಮ್ಮ ಮುಂದೆ ಇಟ್ಟಿದ್ದಾರೆ. ಕೆಸರೂರಿನ ಅವನತಿಗೆ ಅಲ್ಲಿನ ಸಮಾಜ ಅಥವಾ ರಾಜಕಾರಣ ಅಥವಾ ಬಾಹ್ಯ ಒತ್ತಡಗಳು ಕಾರಣವೋ ಎಂಬುವುದು ಮುಖ್ಯವಾಗಿದೆ. ಈ ಎಲ್ಲಾ ಕಾರಣದಿಂದ ಅಲ್ಲಿನ ಒಟ್ಟು ವ್ಯವಸ್ಥೆಯು ಅಸ್ಥಿರತೆಯಿಂದ ಕೂಡಿದೆ ಎಂಬ ಅಂಶ ಮನದಟ್ಟಾಗುತ್ತದೆ.

* ಜುಗಾರಿಕ್ರಾಸ್ ಕಾದಂಬರಿಯಲ್ಲಿ ಪ್ರಮುಖವಾಗಿ ಮೂರು ಆಯಾಮಗಳನ್ನು ಗುರುತಿಸಬಹುದು. ಅವುಗಳಲ್ಲಿ ಮುಖ್ಯವಾಗಿ ಮನುಷ್ಯ, ಸಮಾಜ ಮತ್ತು ಪರಿಸರ ಎಂಬುವುದಾಗಿದೆ. ಇವುಗಳು ಒಂದಕ್ಕೊಂದು ಅವಿನಾಭಾವ ಸಂಬಂಧವನ್ನು ಬೆಸೆದುಕೊಂಡಿರುತ್ತದೆ. ಆದರೆ ಇದು ಕಾಲದ ಗತಿಸ್ಥಿತಿಯಲ್ಲಿ ಬದಲಾವಣೆಯನ್ನು ಹೊಂದಿಕೊಂಡು ಬಂದಿದೆ. ಇಲ್ಲಿನ ಮನುಷ್ಯ ಸಮಾಜವು ಇಡೀ ವಿಶ್ವ ವ್ಯವಸ್ಥೆಗೆ ಮಾದರಿ ರೂಪ ಆಗಿದೆ. ಮಾನವ ಲೋಕದ ವಿದ್ಯಮಾನವನ್ನೆಲ್ಲಾ ಲೇಖಕರು ಇಲ್ಲಿ ಒಂದು ಲೀಲೆಯಾಗಿ ನೋಡಿದ್ದಾರೆ. (ಪು.ಸಂ.೯೩ ರಲ್ಲಿ) ಈ ಕಾದಂಬರಿಯು ಇಪ್ಪತ್ನಾಲ್ಕು

ಘಂಟೆಗಳಲ್ಲಿ ನಡೆಯುವ ಸನ್ನಿವೇಶ ಆಗಿದೆ. ಅದರಂತೆ ಈ ಸಮಯದಲ್ಲಿ ನಡೆಯುವ ಅನೇಕ ರೀತಿಯ ಸನ್ನಿವೇಶ, ಸಂದರ್ಭಗಳು ಬಹುಮುಖ್ಯವಾದ ಪಾತ್ರವನ್ನು ವಹಿಸಿದೆ. ಯಾರು ಯಾರನ್ನು ನಿಯಂತ್ರಿಸುತ್ತಾರೆ? ಮತ್ತು ಎಲ್ಲರನ್ನು ನಿಯಂತ್ರಿಸುವ ಒಬ್ಬ ಮುಖಂಡ ಇದ್ದಾನೆಯೇ? ಈ ಎಲ್ಲಾ ಚಟುವಟಿಕೆಗಳ ಆದಿ, ಅಂತ್ಯ ಯಾವುದು? ಇತ್ಯಾದಿ ಪ್ರಶ್ನೆಗಳು ನಮ್ಮ ಕಣ್ಣ ಮುಂದೆ ಮೂಡಿ ಬರುತ್ತದೆ. ಈ ಪುಟ್ಟ ಕಾದಂಬರಿಯ ವಿಷಯ ನಿರೂಪಣೆಯು ವಿಸ್ತೃತವಾಗಿರುವಂತೆ ರಚಿಸಲಾಗಿದೆ. ಕಾದಂಬರಿಯಲ್ಲಿ ವಿಷಯಗ್ರಹಿಕೆಯು ತೇಜಸ್ವಿಯವರ ಇನ್ನಿತರ ಬರಹಗಳಿಗಿಂತ ಭಿನ್ನವಾಗಿದೆ.

೭) ಚಿದಂಬರ ರಹಸ್ಯ ಮೇಲುನೋಟಕ್ಕೆ ಶಾಮನಂದನ ಅಂಗಾಡಿಯ ಪತ್ತೇದಾರಿಕೆಯ ಕಥೆಯಾಗಿ ತೋರುತ್ತದೆ. ಏಲಕ್ಕಿ ಬೋರ್ಡಿನ ಇಂಟೆಲಿಜೆನ್ಸ್ ಆಫೀಸರ್ ಆದ ಅಂಗಾಡಿ ಏಲಕ್ಕಿ ಬೆಳೆ ಕುಸಿಯುತ್ತಿರುವ ಬಗ್ಗೆ ತನಿಖೆ ಮಾಡಿ ಕೇಂದ್ರ ಸರಕಾರಕ್ಕೆ ವರದಿ ಕಳಿಸಲೆಂದು ಕೆಸರೂರಿಗೆ ಬಂದಿದ್ದಾನೆ. ಕೆಸರೂರಿನಲ್ಲಿ ತನಿಖೆ ಆರಂಭಿಸಿದ ಕೆಲವೇ ದಿನಗಳಲ್ಲಿ ಆತನಿಗೆ ಗೊತ್ತಾಗುತ್ತದೆ ಈ ಸಮಸ್ಯೆ ಕೆಸರೂರಿನ ಹಲವಾರು ಸಮಸ್ಯೆಗಳೊಂದಿಗೆ ತಳಕು ಹಾಕಿಕೊಂಡಿದೆ ಎಂದು. (ಪು.ಸಂ.೮೭) ಇಲ್ಲೆಲ್ಲ ಗಮನಿಸಿದಾಗ ಅಂಗಾಡಿಗೆ ಕೆಸರೂರಿನ ಏಲಕ್ಕಿ ಬೆಳೆ ಕುಸಿತ ಮತ್ತು ಇದಕ್ಕೆ ಹೊಂದಿಕೊಂಡ ಜೋಗಿಹಾಳರ ಸಂಶೋಧನೆಯ ಬಗ್ಗೆ, ಅವರ ಸಾವಿನ ಬಗ್ಗೆ ಕಳಕಳಿ ಇದೆ. ಇದಕ್ಕೆ ತದ್ವಿರುದ್ಧವಾಗಿ ಜೂನಿಯರ್ ಕಾಲೇಜಿನ ಅರ್ಥಶಾಸ್ತ್ರ ಪ್ರಾಧ್ಯಾಪಕ ಡಾ। ರಾಮಚಂದ್ರನಿಗೆ ಚಿಕ್ಕಮಗಳೂರು ಜಿಲ್ಲೆಯೇ ಒಂದು ಸಮಸ್ಯೆಯಾಗಿ ಪರಿಣಮಿಸುತ್ತದೆ. ಕೆಸರೂರಿನ ಬದುಕು ಜಟಿಲವೂ, ರಹಸ್ಯಾತ್ಮಕವೂ ಆಗಿದೆ. ಊರಿನ ರಾಜಕಾರಣಕ್ಕೂ, ಏಲಕ್ಕಿ ಸಂಶೋಧನಾ ಕೇಂದ್ರಕ್ಕೂ, ಪರಿಸರ ನಾಶಕ್ಕೂ,ಶೋಷಣೆ- ದೌರ್ಜನ್ಯಗಳಿಗೂ ಪರಸ್ಪರ ಸಂಬಂಧವಿದೆ.

ಜನರು ತಮ್ಮ ಬದುಕಿನ ಬಗೆಗೆ ವಿವಿಧ ರೀತಿಯ ವೃತ್ತಿಯನ್ನು ಆಯ್ದುಕೊಳ್ಳುತ್ತಿದ್ದರು. ಇದಕ್ಕಾಗಿ ಜನರು ಹಲವು ದಾರಿಗಳನ್ನು ಕಂಡುಕೊಂಡಿದ್ದಾರೆ. ತಾವು ಇರುವ ಪರಿಸರ, ಸಮಾಜ ಮತ್ತು ರಾಜಕೀಯ ಈ ಆಯಾಮಗಳು ಒಂದಕ್ಕೊಂದು, ಸಾಮಾಜಿಕ ಪ್ರಗತಿಯನ್ನು ಸಾಧಿಸುವುನ್ನು ಕಾಣುತ್ತೇವೆ.

* ಜುಗಾರಿಕ್ರಾಸ್ ಕಾದಂಬರಿಯಲ್ಲಿ ಪತ್ತೇದಾರಿ ಶೋಧನೆಗಳು ಇವೆ. ತೇಜಸ್ವಿಯು ಹಕ್ಕಿಗಳ ಬಗ್ಗೆ, ಕೀಟ ಪ್ರಪಂಚದ ಅದ್ಭುತ ವಿಸ್ಮಯಗಳ ಬಗ್ಗೆ, ಸಸ್ಯ ಪ್ರಾಣಿಗಳ ಬಗ್ಗೆ ಆಕಾಶ ಕಾಯಗಳ ಬಗೆಗೆ ವೈಶಿಷ್ಟ್ಯಪೂರ್ಣವಾದ ಬರವಣಿಗೆಯನ್ನು ಮಾಡಿದ್ದಾರೆ. ತೇಜಸ್ವಿಯವರು ತಿಳಿಸಿರುವಂತೆ ಜುಗಾರಿಕ್ರಾಸ್ ಮನುಷ್ಯರಿಂದಲೇ ತುಂಬಿದ ಪ್ರದೇಶವಾಗಿದ್ದರೂ, ಅಲ್ಲಿ ಜನಸಾಮಾನ್ಯರೇ ಮುಖ್ಯವಾಗುವುದಿಲ್ಲ. ಅಲ್ಲಿನ ಪ್ರತಿಯೊಂದು ಅಂಶಗಳು, ಆಯಾಮಗಳು ಬೆರಗನ್ನು ಉಂಟು ಮಾಡಿದೆ. ವಾಸ್ತವ ಜಗತ್ತಿನ ಅಥವಾ ಲೋಕದ ಬಗೆಗಿನ ಸತ್ಯವನ್ನು, ಜ್ಞಾನವನ್ನು ನಮಗೆ ಉಂಟು ಮಾಡುತ್ತದೆ. ಮುಖ್ಯವಾಗಿ ಮನುಷ್ಯ ನಾಗರೀಕತೆಯ ಬಗೆಗೆ ಹೊಸ ಆಯಾಮವನ್ನು ಉಂಟು ಮಾಡಿದೆ ಅವುಗಳಲ್ಲಿ

ರಾಜಕೀಯ, ಸಾಮಾಜಿಕ, ಆರ್ಥಿಕ ಇನ್ನು ಮುಂತಾದ ವಿಚಾರವನ್ನು ನಮಗೆ ಒದಗಿಸುತ್ತದೆ. "ಎಲ್ಲವನ್ನು ಲೀಲೆಯಾಗಿ ಪರಿಭಾವಿಸುವ ಈ ಕ್ರಮದಲ್ಲಿ ಯಾವಾಗಲೂ Politically correct ನಿಲುವನ್ನೇ ತಾಳಬೇಕಾದ ' ಪ್ರಗತಿಶೀಲ' ಲೇಖಕನ ಮೇಲಿರುವ ಒತ್ತಡ ಒತ್ತಾಯಗಳು ತೇಜಸ್ವಿಯವರ ಮೇಲೆ ಕೆಲಸ ಮಾಡಿದ ಹಾಗೆ ಕಾಣುವುದಿಲ್ಲ"[೭] (ಪು.ಸಂ.೯೫ ತೇಜಸ್ವಿ ಕಥನ ಟಿ.ಪಿ.ಅಶೋಕ).

ನಾವು ಕಾದಂಬರಿಯನ್ನು ಪತ್ತೇದಾರಿ ಅಥವಾ ವಾಸ್ತವವಾದಿ ವಿವರಗಳಿಂದಲೇ ನೋಡುವುದಾದರೆ ಅದು ಅಷ್ಟಕ್ಕೆ ಮಾತ್ರ ಸೀಮಿತವಾಗಿಲ್ಲ. ನಾಲ್ಕಾರು ದಾರಿ ಕೂಡುವ ಒಂದು ಭಾಗವನ್ನು ಜುಗಾರಿಕ್ರಾಸ್ ಎಂದು ಕರೆಯಲಾಗಿದೆ. ಇದನ್ನು ನಾವು ಭೌಗೋಳಿಕ ನೆಲೆಯಿಂದ, ವಾಸ್ತವತೆಯಿಂದ ನೋಡಬಹುದು. ಆದರೆ ತೇಜಸ್ವಿಯವರ ಕಥಾ ಶೈಲಿಯು ಒಂದು ರೀತಿಯ ನವಿರು ಹಾಸ್ಯದಿಂದ ಕೂಡಿದ್ದು, ಕಲ್ಪನಾ ಲೋಕಕ್ಕೆ ಎಳೆದು ಬಿಡುವ ತಂತ್ರಗಾರಿಕೆಯು ಬಹಳ ಮುಖ್ಯವಾಗಿದೆ.

೮) ಚಿದಂಬರ ರಹಸ್ಯದಲ್ಲಿ ಎಲ್ಲಾ ಸಾಮಾಜಿಕ ಸ್ಥಿತ್ಯಂತರಗಳ ಹಿಂದೆ ಅಡಗಿರುವ ಸತ್ಯಾಸತ್ಯತೆಯನ್ನು ಪತ್ತೆ ಹಚ್ಚಲು ಒಬ್ಬ ಸಾಮಾಜಿಕ ವ್ಯಕ್ತಿ ನಡೆಸುವ ಹೋರಾಟವೇ ನಮಗೆ ಮುಖ್ಯವಾಗಿ ಕಾಣುತ್ತದೆ. ಈ ಅನ್ವೇಷಣೆ ಮುಖ್ಯವಾಗಿ ಸತ್ಯಶೋಧನೆಯೇ ಆದರೂ, ಅದರ ಪರಿಕ್ರಮದಲ್ಲಿ ಸಾಮಾಜಿಕ ಸಂಬಂಧಗಳು ಮಹತ್ವದ ಪಾತ್ರವನ್ನು ವಹಿಸುತ್ತದೆ. ಆದ್ದರಿಂದ ಈ ಸಾಮಾಜಿಕ ಸಂಬಂಧಗಳನ್ನು ಒಡೆದು ನೋಡುವುದು ಕೂಡ ತೇಜಸ್ವಿಯವರ ಬರಹದ ಒಂದು ಮುಖ್ಯ ಕ್ರಮವಾಗಿದೆ.

ತೇಜಸ್ವಿಯವರು ಭಾಷೆಯ ಮಿತಿ ಮತ್ತು ಭಾಷೆಯು ಭಾಷಾತೀತವಾದವನ್ನು ಆಕ್ರಮಿಸುವ ಬಗೆಯನ್ನು ಅನ್ವೇಷಿಸಲು ಪ್ರಯತ್ನಪಟ್ಟವರು. ಚಿದಂಬರ ರಹಸ್ಯದಲ್ಲಿ ಕ್ವಾಂಟಂ ಮೆಕಾನಿಕ್ಸ್‌ನ ಸಿದ್ಧಾಂತವಾದ ವಸ್ತುವಿನ ದ್ವಂದ್ವ ರೂಪತೆಯನ್ನು ಕಥಾ ನಿರೂಪಣೆಗೆ ಬಳಸಿಕೊಳ್ಳುವ ಕ್ರಮವನ್ನು ಕಾಣಬಹುದು. ಪ್ರತಿಯೊಂದು ವಸ್ತುವಿನಲ್ಲೂ ಇರುವ ಅಣು, ಪರಮಾಣುಗಳಲ್ಲೂ ಸುತ್ತುವ ಕ್ವಾಂಟಂ ಕಣ ಅಥವಾ ಪ್ರೋಟೀನ್, ಎಲೆಕ್ಟ್ರಾನ್‌ಗಳಿಂದ ಹೊಮ್ಮುವ ಮನುಷ್ಯ ಪ್ರಜ್ಞೆ ಸ್ವತಂತ್ರವೇ ಅಥವಾ ನಿಯಮಗಳಿಗೆ ಅಧೀನವೋ ಎಂಬ ಪ್ರಶ್ನೆಯನ್ನು ಎತ್ತುತ್ತಲೇ ಕೆಸರೂರು ಸಾಗುವ ದುರಂತವನ್ನು ಚಿತ್ರಿಸುತ್ತಾರೆ.

ಕ್ವಾಂಟಂ ಮೆಕಾನಿಕ್ಸ್ ಬೆಳಕಿನ ದ್ವಂದ್ವರೂಪತೆಯ ವಾದವನ್ನು ಮುಂದಿಟ್ಟಾಗ ಸತ್ಯದ ಹೊಸದರ್ಶನ ಗೋಚರಿಸಿತು. ಕೆಸರೂರಿನ ದುರಂತಕ್ಕೆ ಆಯಾ ಪಾತ್ರದ ದೃಷ್ಟಿಯಿಂದಲೇ ಸತ್ಯ ಗೋಚರಿಸಲು ಆರಂಭಿಸುತ್ತದೆ. ಯುವಕನ ದೃಷ್ಟಿಯಲ್ಲಿ ಕಾಡನ್ನು ಚಿಕ್ಕಮಗಳೂರಿನ ದುರಂತ ಕಾಫಿಕಲ್ಚರ್‌ನಲ್ಲಿ ಅಡಗಿದ್ದರೆ, ಇತರರ ದೃಷ್ಟಿಯಲ್ಲಿ ಕಾಡನ್ನು ಬತ್ತಲುಗೊಳಿಸುವ ಬ್ಯಾರಿಗಳು, ಕಂಟ್ರಾಕ್ಟರುಗಳು, ವನ್ಯಜೀವಿಗಳನ್ನು ಹಾಳುಮಾಡುವ ಗೋಸಾಯಿಗಳು ಮೂಢನಂಬಿಕೆಯಲ್ಲೆ ಹೂತು ಹೋಗಿರುವ ಜನರು, ಜಾತಿಯತೆ, ಮತೀಯವಾದ ಹೀಗೆ ವಿಭಿನ್ನವಾದ ದೃಷ್ಟಿಕೋನವು ಕೆಸರೂರಿನ ಅವನತಿಗೆ ಕಾರಣ ಎಂಬುವುದನ್ನು ಅಲ್ಲಗಳೆಯುವಂತಿಲ್ಲ.

* ಜುಗಾರಿಕ್ರಾಸ್ ಎಂಬುವುದು ಕಾದಂಬರಿಯಲ್ಲಿ ಕೇಂದ್ರ ಬಿಂದು ಆಗಿದೆ. ದೋಣಿಹೊಳೆ, ಕಾಡುದೇವನಪುರದ ಸುತ್ತಲಿನ ಪರಿಸರಗಳೇ ಮುಖ್ಯ ಪಾತ್ರಗಳು ಆಗಿವೆ. ಸುರೇಶ ಮತ್ತು ಗೌರಿಯರ ಪಾತ್ರಗಳು ದೇವಪುರದ ಅಂತರಂಗದರ್ಶನ ಮಾಡಿಸುವ ಬೆಳಕಿಂಡಿಗಳಾಗಿವೆ. ಇವರಿಬ್ಬರು ಹೊಸ ಹೊಸ ಸಾಹಸಗಳ, ಅನುಭವಗಳ ಅನ್ವೇಷಣೆಯಲ್ಲಿ ನಿರತರಾಗಿರುತ್ತಾರೆ. ತಂದೆ ಕೊಟ್ಟ ದುಡ್ಡಿನಲ್ಲಿ ರಬ್ಬರ್ ತೋಟ ಮಾಡುತ್ತೇನೆಂದು ಹೊರಟ ಸುರೇಶ, ಗೌರಿಯರು ರಬ್ಬರ್ ಒಂದನ್ನು ಬಿಟ್ಟು ಉಳಿದೆಲ್ಲವನ್ನು ಹಾಕುತ್ತಾರೆ. ಅವುಗಳಲ್ಲಿ ಮುಖ್ಯವಾಗಿ ಸೀಐಲೆಂಡ್ ಕಾಟನ್ನು, ಕಾಶ್ಮೀರದ ಕಂಟೆಂಡರ್‌ಬೀನ್ಸು, ಹಾಲೆಂಡಿನ ಆಲೂಗಡ್ಡೆ, ಆಫ್ರಿಕಾದ ಅಸ್ಸಿರಿಯಾ ಮ್ಯುಟುಂಡ ನೆಲಗಡಲೆ ಇವುಗಳಲ್ಲದೆ ಕಾಶ್ಮೀರದಿಂದ ಕೇಸರಿ, ಸಿಲೋನಿನಿಂದ ದಾಲ್ಚಿನ್ನಿ ಇತ್ಯಾದಿ. ಇಲ್ಲೆಲ್ಲಾ ತೇಜಸ್ವಿಯವರ ಬರವಣಿಗೆಯಲ್ಲಿ ಸಹಜವಾದ, ನವಿರಾದ, ಹಾಸ್ಯವಿರುವುದನ್ನು ಗಮನಿಸಬಹುದು. ಈ ಕಾದಂಬರಿಯಲ್ಲಿ ಕಂಡು ಬರುವ ಬಹುಮುಖ್ಯವಾದ ಅಂಶ ಕ್ರಿಯಾಶೀಲತೆ.

ತಮಗರಿಯದೆ ತಮ್ಮ ಏಲಕ್ಕಿ ಮೂಟೆಯಲ್ಲಿ ಕಳ್ಳರು ಇಟ್ಟ ಸಾಮಾಗ್ರಿಗೆ ಬರಬೇಕಾದುದಕ್ಕಿಂತ ಒಂದು ಲಕ್ಷ ರೂ ಹೆಚ್ಚು ಬಂದಾಗ, ಅದನ್ನು ಕೊಟ್ಟವನು ಇರಿತಕ್ಕೆ ಒಳಗಾಗಿ ಆಸ್ಪತ್ರೆ ಸೇರಿದ್ದರಿಂದ ಆ ಹಣವನ್ನು ಏನು ಮಾಡಲು ತಿಳಿಯದೆ, ಕೈಯಲ್ಲಿ ಒಂದೂವರೆ ಲಕ್ಷ ರೂ ಇಟ್ಟುಕೊಂಡೆ ವಿಚಿತ್ರ ಮಾನಸಿಕ ತೊಳಲಾಟದಲ್ಲಿ ಇದ್ದ ಸುರೇಶ ಮತ್ತು ಗೌರಿಯರ ಸ್ಥಿತಿ ಇಡೀ ಮನುಷ್ಯನ ಹಣೆ ಬರಹದ ಅತಂತ್ರ ಸ್ಥಿತಿಗೆ ಸಂಕೇತದಂತಿತ್ತು.

೯) ಚಿದಂಬರ ರಹಸ್ಯ ಇಲ್ಲಿ ' ಸಮಾಜ' ಎಂದು ಗುರುತಿಸಲ್ಪಡುವುದು ಕೇವಲ ಮಾನವ- ಮಾನವನ ನಡುವಿನ ಸ್ವಭಾವ. ನಡವಳಿಕೆಯಿಂದ ಉಂಟಾದ ಕೇವಲ ಮನುಷ್ಯ ಸಮಾಜವಲ್ಲ. ಅದು ಮಾನವನ ಸ್ವ-ನಿರ್ಮಿತ ಸಮಾಜ ಮತ್ತು ಪ್ರಕೃತಿಯ ನಡುವಿನ ಸಂಬಂಧದಿಂದ ಉಂಟಾದ ಪರಿಸರ. " ಹೆಮ್ಮರಗಳ ಬೃಹದಾಕಾರದ ಕರಿಛಾಯೆಯಲ್ಲಿ ಗಿರಿಕಂದರದಲ್ಲಿ ಕವಿದಿದ್ದ ಮಹನ್ಮೌನಗಳಲ್ಲಿ ಇಬ್ಬರಿಗೂ ತಾವು ಹಿಡಿದಿದ್ದ ಬಂದೂಕು ಒಂದು ಕ್ಷುದ್ರ ಆಯುಧದಂತೆ ಕಂಡಿತು".[೮] ( ಪು.ಸಂ ೧೦೦) ಕೃಷ್ಣಪ್ಪಗೌಡ ಮತ್ತು ಚೀಂಕ್ರನಿಗೆ ಆದ ಈ ಅನುಭವ ಪರಿಸರದ ಎದುರು ಮಾನವ ನಿರ್ಮಿತವಾದ ಭೌತಿಕ, ಸಾಮಾಜಿಕ ಕ್ರಿಯೆಗಳು ತೀರಾ ಗೌಣವಾದವು. ಹಾಗೆಯೇ ಮಾನವನು ಪ್ರಕೃತಿಯೊಂದಿಗೆ ಸಂಘರ್ಷಕ್ಕೆ ಇಳಿದಿರುವುದು ತನ್ನ ವ್ಯಕ್ತಿತ್ವದ ಲೋಪವನ್ನು, ಆತ್ಮಪತನದ ಸತ್ಯವನ್ನು ಮುಚ್ಚಲು ಎಂಬುವುದು ಇನ್ನೊಂದು ಬಗೆಯದಾಗಿದೆ.

ವ್ಯಕ್ತಿತ್ವದ ಅಪಜಯವನ್ನು ಒಪ್ಪಿಕೊಂಡ ವ್ಯಕ್ತಿ ಸತ್ಯಾನ್ವೇಷಣೆಯ ಶೋಧಕನಾಗುತ್ತಾನೆ. ವ್ಯಕ್ತಿ ಮತ್ತು ಪರಿಸರದ ಮಧ್ಯದ ಅಮೂರ್ತವಾದ, ಸಂಬಂಧ ಮುಂದುವರಿಯುತ್ತದೆ. ಇದಕ್ಕಾಗಿ ಅಂಗಡಿ ಮತ್ತು ಜಯರಾಂರ ವ್ಯಕ್ತಿತ್ವವನ್ನೇ ನೋಡಬಹುದು. ಅಂಗಡಿ ಹೇಳಿಕೊಂಡಂತೆ ನಾನಾ ಹೆಸರುಗಳಲ್ಲಿ, ಉದ್ಯೋಗದ ಬದಲಾವಣೆಯಲ್ಲಿಯೇ ಬದುಕುತ್ತ

ತನ್ನ ಬಗ್ಗೆ, ಪರಿಸರ ಸಮಾಜದ ಬಗ್ಗೆ ಕಲ್ಪನೆಗಳನ್ನು ಕಟ್ಟುತ್ತಾ ಇರುವವನು. ಇವನ ಕಲ್ಪನೆ, ತಾರ್ಕಿಕತೆ, ಪತ್ತೇದಾರಿಕೆ ಎಲ್ಲಾ, ಒಂದೇ ಒಂದು ಎಳೆ ತಪ್ಪಿದರೂ ನಗೆಪಾಟಲಾಗಿ, ಇವನ ಅಂತಃ ಸಾಕ್ಷಿ ದಿಗಿಲುಗೊಳ್ಳುತ್ತದೆ ಎಂಬುದು ಗೋಸಾಯಿಗಳ ಪಲಾಯನದಿಂದ ಗೊತ್ತಾಗುತ್ತದೆ. ಇದೇ ರೀತಿ ಇದ್ದ ಜಯರಾಂ, ತನ್ನ ಪರಿಸರದ ಸಂಬಂಧವನ್ನು ಅರ್ಥೈಸಿಕೊಂಡು ವಸ್ತುನಿಷ್ಠವಾದ, ಮೌಲಿಕವಾದ ವ್ಯಕ್ತಿಯಾಗುತ್ತಾನೆ.

* 'ಜುಗಾರಿಕ್ರಾಸ್' ತನ್ನ ಹೆಸರನ್ನು ಅನ್ವರ್ಥಗೊಳಿಸುವ ಒಂದು ಸ್ಥಳದ ಹೆಸರು. ಮೇದರಹಳ್ಳಿ ಮತ್ತು ದೇವಪುರ ಹಳ್ಳಿಗಳು ಈ ಊರಿಗೆ ಸಮೀಪವಾಗಿದೆ. ಇಲ್ಲಿಯ ಹಳೆಯ ಬುಟ್ಟಿ ಬಿದಿರಿನ ಗುಡಿ ಕೈಗಾರಿಕೆ ನಶಿಸಿಹೋಗಿದೆ. ಕಾಫಿ, ಏಲಕ್ಕಿ ತೋಟಗಳ ಮೂಲಕ ಪಟ್ಟಣದ ನಾಗರೀಕತೆ ಬೆಳೆದಿದೆ. ಆದರೆ ಪಾರಂಪರಿಕವಾಗಿ ಬಂದ ಕಳ್ಳದಂಧೆ ಇನ್ನಷ್ಟು ದೈತ್ಯಾಕಾರ ತಾಳಿ ಮುಂದುವರಿದು ಬಂದಿದೆ. ಇಲ್ಲೆಲ್ಲ ಸೂಕ್ಷ್ಮತೆಯನ್ನು ಗಮನಿಸಿದಾಗ ರಾಜಕೀಯ ಮತ್ತು ಸಾಮಾಜಿಕ ಸ್ಥಿತ್ಯಂತರಗಳು ನರರಾಕ್ಷಸರಿಗೆ ನೆರವು ನೀಡಿ, ಅಮಾಯಕರು ಈ ಸುಳಿಗೆ ಹೇಗೆ ಬಲಿಯಾಗುತ್ತಾರೆ ಎಂಬುವುದನ್ನು ನಾವು ಇಲ್ಲಿ ಗುರುತಿಸಬಹುದಾಗಿದೆ.

ಎಲ್ಲ ಸಮಾಜದಲ್ಲಿರುವಂತೆ ಇಲ್ಲಿಯೂ ಕ್ರಾಂತಿಯ ಕನಸು ಕಾಣುವ ಸುರೇಶ– ಗೌರಿಯಂಥವರು, ತೀರಾ ಪುಕ್ಕಲುತನದ ಗಂಗೂಲಿಯಂಥವರು ಇಲ್ಲಿಯ ಬದುಕಿಗೆ ಹೊಂದಿಕೊಂಡವರು ಇದ್ದಾರೆ. ಹಾಗೆಯೇ ಸಜ್ಜನಿಕೆಯ ಶೇಷಪ್ಪ, ವಿಕ್ಷಿಪ್ತತೆಯ ರಾಜಪ್ಪ ಇವರೂ ಈ ಕಥೆಯೊಳಗೆ ಬರುತ್ತಾರೆ. ಇಪ್ಪತ್ನಾಲ್ಕು ಘಂಟೆಗಳ ಘಟನೆಗಳಿಗೆ ತೇಜಸ್ವಿ ಭೂಮಿಕೆಯನ್ನು ಸಿದ್ಧಗೊಳಿಸುತ್ತಾರೆ. ಜನ ಸಾಮಾನ್ಯರ ಅಸ್ತಿತ್ವ ನಶಿಸಿ ಹೋಗುತ್ತಿರುವ ಕುರಿತು ವ್ಯಂಗ್ಯ– ವಿಷಾದಗಳ ಛಾಯೆ ದಟ್ಟವಾಗಿದೆ. ರಾಜಕೀಯ ಪ್ರಶ್ನೆ ಬಂದಾಗ ಹತಾಶೆಯೇ ಇಲ್ಲಿ ಪ್ರಧಾನವಾಗಿ ಅಭಿವ್ಯಕ್ತಗೊಳ್ಳುತ್ತದೆ. ಸರಳ ಸಾಮಾನ್ಯ ವ್ಯಕ್ತಿಗಳ ಬದುಕು ಕಾದಂಬರಿಗೆ ಹೊಸ ಆಯಾಮವನ್ನು ಉಂಟುಮಾಡಿದೆ.

೧೦) ಚಿದಂಬರ ರಹಸ್ಯ ಕಾದಂಬರಿಯಲ್ಲಿ ಗ್ರಾಮ ಜೀವನದ ವಿಘಟನೆಯ ಆಶಯವನ್ನು ಹೊಂದಿರುವುದನ್ನು ಗುರುತಿಸಬಹುದು.ಇಲ್ಲಿಯ ಕ್ರಿಯೆಗಳು ಎರಡು ಸ್ತರಗಳಲ್ಲಿ ನಡೆಯುತ್ತದೆ. ಮೊದಲನೆಯದಾಗಿ ಘಟನಾವಳಿಗಳ ಭಾಗವಾಗಿ ಬರುವ ಪಾತ್ರಗಳ ಚಿತ್ರಣ. ಎರಡನೆಯದು ಭಾಷೆಯ ಮೂಲಕ ಕಾದಂಬರಿಯ ಅನ್ವೇಷಣೆಗೆ ತೊಡಗುವ ಕ್ರಮ. ಕೆಸರೂರಿನ ಎರಡು ಗುಂಪುಗಳ ನಡುವಿನ ದ್ವೇಷ– ಅಪನಂಬಿಕೆಗಳು ಹಳ್ಳಿಯ ಜೀವನವನ್ನು ಕಲುಷಿತಗೊಳಿಸಿ ಜಾತಿಯ ದಂಗೆಗಳನ್ನು ಪ್ರಚೋದಿಸಿ, ವಿನಾಶಕ್ಕೆ ಕಾರಣವಾಗುತ್ತದೆ. ರಾಮಚಂದ್ರ ಆರಿಸಿಕೊಂಡ ದುರ್ಬಲ ಯುವಕರಿಂದಾಗಿ ಕೆಸರೂರಿನ ಬದಲಾವಣೆಗೆ ಸಾಧ್ಯವಾಗುವುದಿಲ್ಲ.

ದಿಕ್ಕು ದೆಸೆಯಿಲ್ಲದೆ ಅಲೆದಾಡುವ ಯುವಕರು, ತುಳಿತಕ್ಕೆ ಒಳಗಾದ ಸ್ತ್ರೀಯರು ಮತ್ತು ಮೂಢನಂಬಿಕೆಗಳನ್ನು ಹೊಂದಿರುವ ಜನರು, ಇಲ್ಲೆಲ್ಲಾ ಪತ್ತೇದಾರಿ ಶೈಲಿಯಲ್ಲಿ ಕಾದಂಬರಿಯು ನಿರೂಪಿತಗೊಂಡಿದೆ. ಹಳ್ಳಿಯಲ್ಲಿ ಬೇರೂರಿರುವ ಸಮಸ್ಯೆಗಳನ್ನು ಬಗೆಹರಿಸಲು ಪ್ರಯತ್ನಿಸುವ ಜನರು ಹಲವು ನೋವು, ಸಮಸ್ಯೆಗಳನ್ನು

ಎದುರಿಸಬೇಕಾಗುತ್ತದೆ. ಬದುಕಿನ ಸತ್ಯವನ್ನು ನೈಜ ರೀತಿಯಲ್ಲಿ ಕಟ್ಟಿ ಕೊಡುವ ಮತ್ತು ವ್ಯವಸ್ಥೆಯ ದುರಂತವನ್ನು ಪರಿಶೀಲಿಸುತ್ತ ಹೋಗುವ ಪ್ರಯತ್ನವನ್ನು ಈ ಕಾದಂಬರಿಯು ಮಾಡುತ್ತದೆ.

ಜಯಂತಿ-ರಫೀಕರ ಪ್ರಕೃತಿ ಸಹಜ ಪ್ರೇಮ ಮಿಶ್ರತಳಿಯ ವ್ಯವಸಾಯದ ಮೂಲಕ ಏಲಕ್ಕಿ ಉತ್ಪಾದನೆಯನ್ನು ಹಾಗೂ ಆ ಮೂಲಕ ಕೆಸರೂರಿನ ಪುನರುಜ್ಜೀವನವನ್ನು ಸಾಧಿಸುವ ಪ್ರಯತ್ನಗಳು ವಿಫಲವಾದರೂ ಅವು ಪುನರುತ್ಥಾನಗೊಳ್ಳಬಹುದು ಎಂಬ ಅಂಶ ಕಾದಂಬರಿಯಲ್ಲಿ ಪ್ರತಿಧ್ವನಿಸುತ್ತದೆ.

* ಜುಗಾರಿಕ್ರಾಸ್ ತೀರಾ ವಿಶಿಷ್ಟವಾದ ಕಾದಂಬರಿಯಾಗಿದೆ. ಪ್ರಕೃತಿಯ ಸಾಮಾಜಿಕ ಮುಖವನ್ನು ಕನಸಿನಲ್ಲಿ ಎಂಬಂತೆ ಪ್ರದರ್ಶಿಸಿ ಅದರಲ್ಲೂ ಸಾಮಾನ್ಯತೆಯನ್ನು ಸಂವೇದಿಸುತ್ತಾರೆ. ನಮ್ಮಕಾಲದ ಎಲ್ಲ ವಿಷಣ್ಣತೆ ಮತ್ತು ವಿಸ್ಮಯತೆಯನ್ನು ಸಾಮಾಜಿಕ ದುಸ್ತರಗಳ ಮಧ್ಯೆ ಪ್ರದರ್ಶಿಸುತ್ತಾರೆ. ತೇಜಸ್ವಿಯವರ ಬರವಣಿಗೆಯಲ್ಲಿ ಪರಿಸರವೇ ಅತ್ಯಂತ ಪ್ರಭಾವಿ ಅಭಿವ್ಯಕ್ತ ಮಾಧ್ಯಮವಾಗಿದೆ.

ವೈಜ್ಞಾನಿಕ ಬರವಣಿಗೆ ಅವರ ಕೈಯಲ್ಲಿ ಆ ಪ್ರಕಾರದ ಲೇಖನವಾದರೆ ಕಾದಂಬರಿ ಸ್ವಯಂ ಸಿದ್ಧವಾಗಿ ಪರಿಪೂರ್ಣಗೊಳ್ಳುತ್ತದೆ. ಇದು ' ತೇಜಸ್ವಿ' ಮತ್ತು 'ಜುಗಾರಿಕ್ರಾಸ್'ನ ವೈಶಿಷ್ಟ್ಯ ಕೂಡ ಎನ್ನಬಹುದು. ಜುಗಾರಿಕ್ರಾಸ್‌ನ ಒಂದೊಂದು ಅಧ್ಯಯನವನ್ನು ಒಂದೊಂದು ಕಥೆಯಂತೆ ಓದಬಹುದು ಎಂದು ಅನ್ನಿಸುತ್ತದೆ. ಆದರೆ ಈ ಪ್ರಜ್ಞಾ ಪ್ರವಾಹದಲ್ಲಿ ಆಳದಿಂದ ಸಂಚರಿಸುವ ರಭಸವು ಈ ಕಾದಂಬರಿಯ ಓಟ ಮತ್ತು ಓಟದ ನಿಯಂತ್ರಕವೆಂದು ನಮಗೆ ಅರಿವುಂಟು ಮಾಡುತ್ತದೆ. ಕನ್ನಡ ಪ್ರಚಲಿತ ಗದ್ಯ ಜಗತ್ತಿನಲ್ಲಿ ಪ್ರಮುಖ ಬರಹಗಾರರಾಗಿ ತೇಜಸ್ವಿಯು ಈ ಸಾಧ್ಯತೆಯತ್ತ ಬೆಳಕು ಹರಿಸಿದ್ದಾರೆ.

## ೪.೧ ಚಿದಂಬರ ರಹಸ್ಯ ಮತ್ತು ಜುಗಾರಿಕ್ರಾಸ್ ಕಾದಂಬರಿಯಲ್ಲಿ ಕಂಡು ಬರುವ ಪ್ರೇರಣೆ, ಪ್ರಭಾವ ಮತ್ತು ಧೋರಣೆಗಳು

ಕನ್ನಡ ಸಾಹಿತ್ಯ ವಿಭಿನ್ನ ಕಾಲಘಟ್ಟಗಳಲ್ಲಿ ತೇಜಸ್ವಿಯವರು ತಮ್ಮದೇ ಆದ ಬರವಣಿಗೆಯ ಮೂಲಕ ಹೆಸರು ಮಾಡಿದವರು. ಇವರ ಬರಹಗಳಲ್ಲಿ ಸಂಶೋಧನಾ ಶಕ್ತಿಯನ್ನು ಗುರುತಿಸುತ್ತೇವೆ. ' ಚಿದಂಬರ ರಹಸ್ಯ' ಕಾದಂಬರಿಯಲ್ಲಿ ಪತ್ತೇದಾರಿ ವಿಧಾನವಿದೆ. ಬೇರೆ ಯಾವ ಬರಹಗಾರರಲ್ಲಿಯೂ ಕಾಣದ ವಿಭಿನ್ನ ನೋಟ ಚಿದಂಬರ ರಹಸ್ಯವನ್ನು ಪುನಃ ಓದುವಂತೆ ಮಾಡುತ್ತದೆ. ಇವರ ಬರವಣಿಗೆ ಚೇಷ್ಟೆ, ಲೇವಡಿ, ವ್ಯಂಗ್ಯಗಳಿಂದ ಮುಕ್ತವಾಗಿದ್ದು, ಆರೋಗ್ಯಕರ ಹಾಸ್ಯವಿರುವುದನ್ನು ಕಾಣಬಹುದು. ಅದೇ ರೀತಿ ಲಘು ಸಾಹಿತ್ಯದ ಹಾಸ್ಯ ಹಾರಾಟದಂಥ ಅಂಶಗಳನ್ನು ಸಲೀಸಾಗಿ ಯಾವ ಸಂಕೋಚವೂ ಇಲ್ಲದಂತೆ ಮುಕ್ತವಾಗಿ ಬಳಸಿಕೊಂಡು ಕಲಾತ್ಮಕ ಜಾಣ್ಮೆಯನ್ನು ತೋರಿದ್ದಾರೆ.

ಚಿದಂಬರ ರಹಸ್ಯ ಕನ್ನಡದ ಅತೀ ಮುಖ್ಯ ಕಾದಂಬರಿಗಳಲ್ಲಿ ಒಂದಾಗಿ ಪರಿಗಣಿಸಲ್ಪಟ್ಟಿದೆ. ಈ ಕಾದಂಬರಿಯಲ್ಲಿ ಕೆಲವು ಭೌತಿಕ ವಿವರಗಳು ಒಂದೇ ಆಗಿದ್ದರೂ ಅವುಗಳ ಸಂಯೋಜನೆಯ ವಿನ್ಯಾಸ ಹಲವು ರೀತಿಯಲ್ಲಿ ಇರಬಹುದು. ಅಂದರೆ ಸತ್ಯ ಎಂಬುದು ಒಂದು ನಿರ್ದಿಷ್ಟ ಆಕಾರವಲ್ಲ. ಬದಲಾಗಿ ಅದು ನೋಡುವವರ ಕಣ್ಣಿಗೆ ತಕ್ಕಂತೆ ರೂಪುಗೊಳ್ಳುತ್ತದೆ ಎಂಬ ಸೂಕ್ಷ್ಮತೆಯ ಅರಿವಾಗುತ್ತದೆ. ಸತ್ಯ ಮತ್ತು ಅರ್ಥ ಒಂದೇ ಅಲ್ಲ, ಬದಲಾಗಿ ಅನೇಕ ಎಂಬ ಗಾಢ ತಿಳುವಳಿಕೆ ತೇಜಸ್ವಿಯವರ ಮಾತಿನಲ್ಲಿ ವಿಧಿತವಾಗುತ್ತದೆ. ಆದ್ದರಿಂದಲೇ ಯಾವ ನಿರರ್ಥಕ ವ್ಯವಸ್ಥೆಯಲ್ಲಿಯೂ, ಎಲ್ಲ ಮಿತಿಗಳ ನಡುವೆಯೂ ಮನುಷ್ಯನ ಸಂಕಲ್ಪ ಮತ್ತು ಕ್ರಿಯೆಗಳಿಗೆ ನೈತಿಕವಾಗಿ ಸಮರ್ಥನೆ ದೊರೆಯುತ್ತದೆ. ತೇಜಸ್ವಿ ಮನುಷ್ಯನ ಪ್ರಯತ್ನಗಳನ್ನು ಅವುಗಳ ಇತಿಮಿತಿಗಳಲ್ಲಿ ಚಿತ್ರಿಸುತ್ತಾರೆಯೇ ಹೊರತು ಅವುಗಳನ್ನು ಸಿನಿಕತನದಿಂದ ನೋಡುವುದಿಲ್ಲ. ಇದುವೇ ಸತ್ಯ. ಇದುವೇ ಅರ್ಥ ಎಂಬ ಅಹಂಕಾರವನ್ನು ಅವರು ಖಂಡಿಸುತ್ತಾರೆ. ಜೀವನದ ಕುರಿತ ಜಿಜ್ಞಾಸೆ ಅಂತಿಮವಾಗಿ ನಮ್ಮನ್ನು ಜೀವನ ವಿಮುಖರನ್ನಾಗಿ ಮಾಡಬಾರದು.

ನಮ್ಮ ಚಟುವಟಿಕೆಗಳೇ ಏಕಮಾತ್ರ ಸತ್ಯವೆಂಬ ಭ್ರಮೆಯಲ್ಲಿ ಜೀವನದ ಅಗಾಧತೆ ಮತ್ತು ವೈಶಾಲ್ಯಗಳು ನಮ್ಮ ಕಣ್ಣು ತಪ್ಪಿ ಹೋಗಬಾರದು. ಜೀವನದ ಅರ್ಥ, ಅದನ್ನು ಶೋಧಿಸುವವರ ವೈಯುಕ್ತಿಕ, ಸಾಮಾಜಿಕ, ಆರ್ಥಿಕ, ರಾಜಕೀಯ, ಮತ್ತು ಐತಿಹಾಸಿಕ ಸಂದರ್ಭಗಳಿಗೆ ಸಾಪೇಕ್ಷವಾಗಿರಬಹುದು ಎಂಬ ವಿನಯ ಅತಿ ಮುಖ್ಯ ಎಂಬುದು 'ಚಿದಂಬರ ರಹಸ್ಯ' ದ ಉಲ್ಲೇಖಾರ್ಹ ವಿಚಾರವಾಗಿದೆ.

ತೇಜಸ್ವಿ ತಮ್ಮ ಕಾದಂಬರಿಯಲ್ಲಿ ಮನುಷ್ಯನ ಸಾಮಾಜಿಕ, ರಾಜಕೀಯ, ಸಾಂಸ್ಕೃತಿಕ, ಆರ್ಥಿಕ ಚಟುವಟಿಕೆಗಳನ್ನು ಕುರಿತು ಸಂಕೀರ್ಣವಾಗಿ ವಿಶ್ಲೇಷಣೆ ಮಾಡುತ್ತಾರೆ. ಆದರೆ ಮನುಷ್ಯನನ್ನೇ ಸೃಷ್ಟಿಯ ಕೇಂದ್ರವಾಗಿ ನೋಡುವುದಿಲ್ಲ. ಅಥವಾ ಸೃಷ್ಟಿಯನ್ನು ಕೇವಲ ಮನುಷ್ಯನ ದೃಷ್ಟಿಕೋನದಿಂದ ನೋಡುವುದಿಲ್ಲ. ಸಾಮಾಜಿಕ, ರಾಜಕೀಯ ಜಿಜ್ಞಾಸೆಯಲ್ಲಿ ತೊಡಗಿಕೊಂಡಾಗ ಕೂಡ ತೇಜಸ್ವಿ ಪ್ರಗತಿಶೀಲ ಮತ್ತು ಬಂಡಾಯ ಲೇಖಕರಿಗಿಂತ ತುಂಬ ಭಿನ್ನವಾಗಿ ಕಾಣುತ್ತಾರೆ. ಚಿದಂಬರ ರಹಸ್ಯದಲ್ಲಿ ಆಡಳಿತ ವ್ಯವಸ್ಥೆಯ ಅಸಂಗತ, ಬೀಭತ್ಸ, ಭೀಕರ ಚಿತ್ರಗಳು ಕಂಡುಬರುತ್ತದೆ. ಇಂತಹ ಚಿತ್ರಗಳು ಒಟ್ಟಾರೆ ಇಡೀ ಸೃಷ್ಟಿಯ ಅಸಂಗತ, ಅಸಂಬದ್ಧ ವಿನ್ಯಾಸದ ಒಳಗೆ ಮೂಡಿ ಬರುವುದರಿಂದ ಅವು ಸಾಮಾನ್ಯ, ಸಾಮಾಜಿಕ, ರಾಜಕೀಯ ಟೀಕೆಗಳನ್ನು ಮೀರಿಸುತ್ತದೆ. ಅಂದರೆ ಇವರು ತಮ್ಮ ಅವಲೋಕನಗಳನ್ನು ಏಕಕಾಲದಲ್ಲಿ ಕಾಲದೇಶಗಳ ಚೌಕಟ್ಟುಗಳಲ್ಲಿಯೂ, ಕಾಲಾತೀತ ಮತ್ತು ದೇಶಾತೀತ ಆಯಾಮಗಳಲ್ಲೂ ಕಾಣಿಸಲು ಪ್ರಯತ್ನಿಸುತ್ತಾರೆ.

ತೇಜಸ್ವಿ ಜಗತ್ತಿನಲ್ಲಿ ದೇವರಿಲ್ಲ. ದೇವರಿಲ್ಲದ ಜಗತ್ತಿನಲ್ಲಿ ಮತ ಧರ್ಮಗಳ ಸೋಂಕಿಲ್ಲದ ಆಧ್ಯಾತ್ಮಿಕ ಶೋಧ ತೇಜಸ್ವಿ ಬರವಣಿಗೆಯ ಪ್ರಮುಖ ಲಕ್ಷಣವಾಗಿದೆ. ಹಕ್ಕಿಗಳ ಬಗ್ಗೆ, ನದಿ, ಸಮುದ್ರ ಸಾಗರಗಳ ಬಗ್ಗೆ, ಅಂತರಿಕ್ಷದ ವಿದ್ಯಮಾನಗಳ ಬಗ್ಗೆ, ಮನುಷ್ಯ

ನಾಗರೀಕತೆಯ ವಿವಿಧ ಘಟ್ಟಗಳ ಬಗ್ಗೆ ಕೂಡ ಬರೆದಿದ್ದಾರೆ. ತೇಜಸ್ವಿಯವರ ಕುತೂಹಲ ಒಂದು ಪಾತ್ರದ ಭಾವ ಲೋಕದಿಂದ ಪ್ರಾರಂಭವಾಗಿ ಇಡೀ ಬ್ರಹ್ಮಾಂಡದತ್ತ ಹಬ್ಬುತ್ತದೆ. ಆದರೆ ಇದು ಕೇವಲ ಮಾನವ ಶಾಸ್ತ್ರೀಯ ಕುತೂಹಲವಲ್ಲ. ಒಂದು ರೀತಿಯಲ್ಲಿ ಆಧ್ಯಾತ್ಮಿಕ ಹುಡುಕಾಟವನ್ನು ನಡೆಸಿದಂತಿದೆ.

ತೇಜಸ್ವಿಯವರ ಇನ್ನೊಂದು ಪ್ರಮುಖ ಕಾದಂಬರಿ ಜುಗಾರಿಕ್ರಾಸ್. ಜಗತ್ತಿನ ಎಲ್ಲ ವಿದ್ಯಮಾನಗಳನ್ನು ಒಳಗೊಂಡ ಸಂಕೀರ್ಣ ರೂಪವಾಗಿದೆ. ಒಂದು ಸ್ತರದಲ್ಲಿ ಈ ಕಾದಂಬರಿ ಹಣಕ್ಕಾಗಿ ಮನುಷ್ಯ ನಡೆಸುವ ಕಪಟ, ವಂಚನೆ, ಹಿಂಸೆಗಳ ಕಥನವಾಗಿದೆ. ಇಲ್ಲಿ ವ್ಯೂಹ–ಪ್ರತಿವ್ಯೂಹಗಳು ನಮ್ಮನ್ನು ಬೆಚ್ಚಿ ಬೀಳಿಸುವಂತಿದೆ. ಚಿದಂಬರ ರಹಸ್ಯ ಮತ್ತು ಜುಗಾರಿಕ್ರಾಸ್‌ನ ನಿರೂಪಣಾ ತಂತ್ರ ಪತ್ತೇದಾರಿ ಕಾದಂಬರಿಗಳ ನಿರೂಪಣಾ ತಂತ್ರಕ್ಕೆ ತೀರಾ ಹತ್ತಿರದಾಗಿದೆ. ತೇಜಸ್ವಿ ನಿರೂಪಣಾ ಶೈಲಿಗೂ, ಅವರ ಜೀವನ ದರ್ಶನಕ್ಕೂ ಇರುವ ತಾತ್ವಿಕ ಸಂಬಂಧ ಬಹಳ ಕುತೂಹಲಕಾರಿಯಾಗಿದೆ. ಮಾನವನ ಕ್ರಿಯಾಹೀನತೆಗೆ ಮತ್ತು ಜೀವನ ವಿಮುಖತೆಗೆ ಕಾರಣಗಳನ್ನು ಸೂಚ್ಯವಾಗಿ ತಿಳಿಸುತ್ತಾರೆ.

ಜುಗಾರಿಕ್ರಾಸಿನ ಕ್ರಿಮಿನಲ್ ಜಗತ್ತನ್ನು ಚಿತ್ರಿಸುವಾಗ ತೇಜಸ್ವಿ ನಮ್ಮ ಭಾವನೆಗಳನ್ನು ಉದ್ದೀಪಿಸುವ ರೀತಿಯಲ್ಲಿ ಬರೆಯುವುದಿಲ್ಲ. ಕಾದಂಬರಿಯ ಒಟ್ಟಾರೆ ರಚನಾ ವಿನ್ಯಾಸವನ್ನು ನಾವು ಗಮನಿಸಿದಾಗ ಹೇಗಾದರೂ ಸರಿ ದುಡ್ಡು ಮಾಡುವುದೇ ಜುಗಾರಿಕ್ರಾಸ್‌ನ ಸಾಮಾನ್ಯ ಮನಃಸ್ಥಿತಿ ಆಗಿರುತ್ತದೆ. ಇದಕ್ಕೆ ತದ್ವಿರುದ್ಧವಾಗಿ ಸುರೇಶ–ಗೌರಿಯರು ಮತ್ತು ಅವರ ಚಟುವಟಿಕೆ ಗೋಚರಿಸುತ್ತದೆ. ಈ ವೈದೃಶ್ಯ ಕಾದಂಬರಿ ಕಟ್ಟಿಕೊಡುವ ಜೀವನ ದರ್ಶನದ ದೃಷ್ಟಿಯಿಂದ ಬಹುಮುಖ್ಯವಾಗಿದೆ.

ತಮ್ಮ ವೈಚಾರಿಕ ನಿಲುವುಗಳನ್ನು ಕಾದಂಬರಿಗಳಲ್ಲಿ ಸ್ಪಷ್ಟವಾಗಿ ಚಿತ್ರಿಸಿದ್ದಾರೆ. ಇವುಗಳಲ್ಲಿ ಪರಸ್ಪರ ಬದಲಾವಣೆ, ವಿರೋಧಾಭಾಸಗಳನ್ನು ಕಾಣಬಹುದು. ಇಂತಹ ಗೊಂದಲ ಪ್ರತಿಯೊಬ್ಬ ಲೇಖಕರಲ್ಲಿ ಇದ್ದರೂ ಕೂಡ ತೇಜಸ್ವಿಯವರು ಆ ನಿಟ್ಟಿನಲ್ಲಿ ಸಾಮಾಜಿಕ ಸ್ಥಿತಿಗಳಿಗೆ ನಿರಂತರವಾಗಿ ಸ್ಪಂದಿಸುವುದನ್ನು ನಾವು ಕಾಣಬಹುದು.

ತೇಜಸ್ವಿಯವರ ಕೆಲವು ತಾತ್ವಿಕ ನಿಲುವುಗಳು ಅವರ ಕಾದಂಬರಿಗಳಲ್ಲಿ ವಿಮರ್ಶಾತ್ಮಕ ರೀತಿಯಲ್ಲಿ ಸೇರಿಕೊಂಡಿದೆ. ಈ ನಿಲುವುಗಳು ಆರಂಭದಲ್ಲಿ ಆಶ್ಚರ್ಯವನ್ನು ಉಂಟು ಮಾಡಿದರೂ, ವಾಸ್ತವದಲ್ಲಿ ನಿಧಾನವಾಗಿ ನಿಜವೆಂದು ನಮಗೆ ಸ್ಪಷ್ಟವಾಗುತ್ತದೆ. ತಮ್ಮ ಬರಹಗಳಲ್ಲಿ ತಾತ್ವಿಕ ನೆಲೆಗಟ್ಟನ್ನು ಅತ್ಯಂತ ಮಾರ್ಮಿಕವಾಗಿ ವಿಶ್ಲೇಷಣೆಗೆ ಒಳಪಟ್ಟು ತೋರಿಸಿದ್ದಾರೆ.

ಸಮಾಜ ನಿರ್ಮಾಣ ಕಾರ್ಯಗಳಲ್ಲಿ ವೈಚಾರಿಕ ಬರಹಗಳು ಯಾವ ರೀತಿ ಪ್ರಭಾವ ಬೀರಿವೆ ಎಂಬುವುದನ್ನು ‘ ಚಿದಂಬರ ರಹಸ್ಯ’ ಮತ್ತು ‘ ಜುಗಾರಿಕ್ರಾಸ್’ ಕಾದಂಬರಿಗಳಲ್ಲಿ ಬಲು ಸ್ಪಷ್ಟವಾಗಿ ಚಿತ್ರಿಸಿದ್ದಾರೆ. ಅಂದರೆ ವಾಸ್ತವಿಕ ಘಟನೆಗಳನ್ನು ಈ ಕಾದಂಬರಿಗಳಲ್ಲಿ ನಿರೂಪಿಸಿದ್ದಾರೆ. ಅವರ ಮಾನವೀಯ ಚಿಂತನೆಗಳು ಅವರ ಬರಹಗಳಲ್ಲಿ ತೀವ್ರವಾಗಿ ವ್ಯಕ್ತಗೊಂಡಿದೆ. ಜಾತ್ಯಾತೀತ ವ್ಯವಸ್ಥೆಯ ಬಗ್ಗೆ ಎಚ್ಚರಿಕೆಯನ್ನು

ಉಂಟು ಮಾಡಿದ್ದಾರೆ.

ತೇಜಸ್ವಿಯವರು ಕಾದಂಬರಿಗಳಲ್ಲಿ ನಿರೂಪಿಸುವ ವಾಸ್ತವಿಕ ಘಟನೆಗಳು ಮತ್ತು ಧ್ವನಿಗಳು ಕಾದಂಬರಿಯ ತಂತ್ರಕ್ಕೆ ವಿಶಿಷ್ಟತೆಯನ್ನು ಒದಗಿಸಿದೆ. 'ಕೆಸರೂರು' ಮತ್ತು ಜುಗಾರಿಕ್ರಾಸ್‌ಗಳು ಅತ್ಯಂತ ಸಮೃದ್ಧ ಶ್ರೀಮಂತ ಪರಿಸರವನ್ನು ಹೊಂದಿರುವ ತಾಣಗಳು. ಏಲಕ್ಕಿ, ಗಂಧ, ತೇಗ ಮೊದಲಾದ ಆರ್ಥಿಕ ಸಂಪನ್ಮೂಲಗಳ ಹುಟ್ಟು ನೆಲೆಗಳಾಗಿವೆ. ಇಂಥ ಪರಿಸರಕ್ಕೆ ಮನುಷ್ಯನ ಸ್ವಾರ್ಥ ರಾಜಕಾರಣ ಮಾರಕವಾಗುವ ಬಗೆಯನ್ನು ಇಲ್ಲಿ ಕಾಣುತ್ತೇವೆ. ಸ್ಥಳೀಯ ಹಾಗೂ ಹೊರಗಿನ ಶಕ್ತಿಗಳ ಕಾಣದ ಕೈಗಳು ಕೋಟ್ಯಂತರ ರೂಪಾಯಿಗಳ ನೈಸರ್ಗಿಕ ಸಂಪತ್ತನ್ನು ಕಬಳಿಸುವ ವಾಸ್ತವತೆಯನ್ನು ಲೇಖಕರು ತಮ್ಮ ಮುಂದೆ ಇಟ್ಟಿದ್ದಾರೆ.

ಕಾಡು ಮತ್ತು ನಾಡು ಅವಸಾನಕ್ಕೆ ಗುರಿಯಾಗುವ ಬಗೆಗಳು ಬಯಲಿಗೆ ಬಂದು, ಹಿಂದೂ-ಮುಸ್ಲಿಂ ಮೂಲಭೂತವಾದಿಗಳ ತಂತ್ರಗಳು ಗಂಟು ಹಾಕಿಕೊಳ್ಳುವುದರಿಂದ ಎದುರಾಗುವ ದುರಂತ ಇಲ್ಲಿ ನಿರೂಪಿತಗೊಂಡಿದೆ. ಮನುಷ್ಯನ ಧಾರ್ಮಿಕ ಮತಾಂಧತೆ, ಹಣದ ಬಗೆಗಿನ ವ್ಯಾಮೋಹಗಳು ಸಮಷ್ಟಿ ಬದುಕನ್ನೇ ಲಂಟಾನಾ ರಾಕ್ಷಸನ ಬಾಯಿಗೆ-ಬೆಂಕಿಗೆ ಆಹುತಿ ಮಾಡುವ ದುರಂತವನ್ನು ಈ ಕೃತಿಗಳು ತಮ್ಮ ಒಡಲಲ್ಲಿ ಇರಿಸಿಕೊಂಡಿದೆ. ಕಾಳದಂಧೆಗಳಿಗೆ ಸರಕಾರ, ಕಾನೂನು ಮತ್ತು ನ್ಯಾಯಾಲಯಗಳ ಸಮ್ಮತಿ ಮತ್ತು ಪರವಾನಗಿಗಳನ್ನು ಗಿಟ್ಟಿಸಿಕೊಂಡು ನಡೆಸುತ್ತಿರುವ ಹಗಲು ದರೋಡೆಗಳಿಂದ ಇಡೀ ಸಂಸ್ಕೃತಿಯನ್ನು ಒಂದಲ್ಲಾ ಒಂದು ದಿನ ದುರಂತಕ್ಕೆ ಒಡ್ಡುವ ಭೀಕರ ಚಿತ್ರಗಳನ್ನು ಈ ಕಾದಂಬರಿಗಳು ಉದ್ದಕ್ಕೂ ಬಿಚ್ಚಿಡುತ್ತವೆ.

ತೇಜಸ್ವಿಯು ತನ್ನ ಸುತ್ತಮುತ್ತಲ ಅನೇಕ ಕೌತುಕಮಯ ವಿದ್ಯಮಾನಗಳನ್ನು ನೋಡುತ್ತಾ ಅವುಗಳ ಬಗ್ಗೆ ತಿಳಿದುಕೊಳ್ಳುತ್ತಾ, ಪಶು, ಪಕ್ಷಿ, ಕ್ರಿಮಿ, ಕೀಟಗಳ ಪ್ರಪಂಚವನ್ನು ತಮ್ಮ ಕುತೂಹಲದ ಕಣ್ಣುಗಳಲ್ಲಿ ತೆರೆದಿಡುತ್ತಾರೆ. "ಸಾಹಿತ್ಯವೇ ನನ್ನ ಸ್ವಧರ್ಮ ಹಾಗಾಗಿ ನಾನು ಏನನ್ನು ಬರೆದರೂ ಅದಕ್ಕೆ ಸಾಹಿತ್ಯದ ಪರಿವೇಷ, ಕಥೆ, ಕಾದಂಬರಿಗಳ ಛಾಯೆ ಇರುತ್ತದೆ."[೯] ಅದಕ್ಕೆ ಇದನ್ನು ಕಥೆಗಳು ಎಂದು ಕರೆದಂತಾಗಿ ಹೇಳಿಕೊಳ್ಳುವ ತೇಜಸ್ವಿ ಸ್ವಾನುಭವದ ಎಲ್ಲೆಯೊಳಗೆ ಎಲ್ಲವನ್ನು ವಿವರಿಸುತ್ತಾರೆ. ತೇಜಸ್ವಿ ಸಾಹಿತ್ಯ ಸೃಜನಶೀಲ ಸಮಾಜವನ್ನು ಚಿತ್ರಿಸುವುದಿಲ್ಲ. ಜಡ ಸಮಾಜದಲ್ಲಿ ಸೃಜನಶೀಲ ವ್ಯಕ್ತಿಗಳನ್ನು ಶೋಧಿಸುತ್ತಾರೆ. ಈ ಅರ್ಥದಲ್ಲಿ ವ್ಯಕ್ತಿ ವಿಶಿಷ್ಟವಾದದ ಬೇರೆ ಬೇರೆ ಹುಡುಕಾಟದ ವಿಭಿನ್ನ ಆವೃತ್ತಿಗಳ ಹಾಗೆ ಅವರ ಕೃತಿಗಳಿವೆ. ದಲಿತ ಲೇಖಕರು ಸಮಾಜದ ಆಕ್ರಮಣಕ್ಕೆ ಸಿಲುಕಿದ ಮಾನವರನ್ನು ಕಾಣಿಸಿದರೆ, ತೇಜಸ್ವಿ ಆಕ್ರಮಣಕ್ಕೆ ಸಿಲುಕದೆ ತಪ್ಪಿಸಿಕೊಂಡು ಸ್ವತಂತ್ರ ಚೈತನ್ಯ ರೂಪಿಸಿಕೊಂಡ ಸ್ವತಂತ್ರ ವ್ಯಕ್ತಿಗಳನ್ನು ಕಾಣಿಸುತ್ತಾರೆ.

ತೇಜಸ್ವಿಯವರ ಶೋಧಕಗುಣ ಹಾಗೂ ಆಧುನಿಕ ವಿಜ್ಞಾನದಲ್ಲಿ ಅವರಿಗೆ ಇರುವ ಶ್ರದ್ಧೆಯು, ಅವರನ್ನು ವಿಜ್ಞಾನದ ಪತ್ತೇದಾರಿ ಅಥವಾ ಲೇಖಕರನ್ನಾಗಿ ಮಾಡಬೇಕಿತ್ತು.

ಆದರೆ ಹಾಗೆ ಆಗಲಿಲ್ಲ. ಅವರು ಶೋಧದ ಜೊತೆಗೆ ಬದುಕನ್ನು ಲಗತ್ತಿಸಿ ಬಿಡುತ್ತಾರೆ. ಮಾನವರಲ್ಲಿ ಅಡಗಿರುವ ಅಪರಿಮಿತ ಚೈತನ್ಯವು ರೂಢಿಗೆ ಬಿದ್ದುಹೋಗಿರುವ ಸಾಂಪ್ರದಾಯಿಕ ಸಮಾಜದಲ್ಲಿ ಸಿಲುಕಿ ಪೂರ್ಣ ಪ್ರಮಾಣದಲ್ಲಿ ಪ್ರಕಟವಾಗುತ್ತಿಲ್ಲ. ಆದ್ದರಿಂದ ಸಮಾಜದ ಅನಿಸಿಕೆಗಳಿಗೆ ಹೆದರದೆ ತಮ್ಮ ಒಳಗಿನ ತುಡಿತದಂತೆ ಕ್ರೀಯಾಶೀಲವಾಗುವ ಬದುಕಿನ ಹಾದಿಯನ್ನು ಆರಿಸಿಕೊಳ್ಳಬೇಕು ಎಂದು ತೇಜಸ್ವಿ ಭಾವಿಸಿದವರು.

ತೇಜಸ್ವಿ ಹಲವಾರು ಪ್ರಕಾರಗಳಲ್ಲಿ ಬರೆದಿದ್ದರೂ ಮೂಲತಃ ಅವರೊಬ್ಬ ಕಥನಕಾರ. ಏನನ್ನು ಬರೆದರೂ ಅದನ್ನು ಕಥೆಯಾಗೇ ಅವರು ಕಲ್ಪಿಸಿಕೊಳ್ಳುತ್ತಾರೆ. ಅವರ ಕಥನ ಕ್ರಮವು ಕನ್ನಡ ಸಾಹಿತ್ಯಕ್ಕೆ ದೊಡ್ಡ ಶಕ್ತಿಯನ್ನು ಸೇರ್ಪಡೆ ಮಾಡಿದೆ. ಹಾಗಾಗಿ ತೇಜಸ್ವಿಯು ಏನನ್ನು ಬರೆದರೂ ಅದಕ್ಕೆ ಸಾಹಿತ್ಯ ಪರಿವೇಷ, ಕಥೆ, ಕಾದಂಬರಿಗಳ ಛಾಯೆ ಇರುತ್ತದೆ. ಇವರ ಕತೆಗಳಲ್ಲಿ ಕೀಟಶಾಸ್ತ್ರ, ಪಕ್ಷಿಶಾಸ್ತ್ರ, ಪ್ರಾಣಿಶಾಸ್ತ್ರ ಮುಂತಾದವುಗಳ ಉಪಯೋಗ ಆಗಿದೆಯಷ್ಟೆ. ಸ್ವಾನುಭವದ ಎಲ್ಲೆಯನ್ನು ಮೀರದೆ ನಿರೂಪಿಸಿರುವ ಇವನ್ನು ಕಥೆಗಳೆಂದೇ ಪರಿಗಣಿಸಬಹುದು. ಅಥವಾ ಇವನ್ನು ಏನೆಂದು ಪರಿಗಣಿಸುವ ಅಗತ್ಯವಾದರೂ ಏನು? ಎಂದು ಅವರು ಹೇಳುವುದುಂಟು. ಸೃಜನಶೀಲ ಮನಸ್ಸುಳ್ಳ ತೇಜಸ್ವಿ ತಮ್ಮ ಅಭಿವ್ಯಕ್ತಿಯ ವಿಸ್ತರಣೆಗಾಗಿ ಕಾದಂಬರಿ ಕ್ಷೇತ್ರವನ್ನು ಆಯ್ಕೆ ಮಾಡಿಕೊಂಡಿದ್ದಾರೆ. ಈ ನಿರ್ಧಾರವು ಸಹೃದಯ ಮನಸ್ಸೊಂದು ಈ ನಾಡಿನ ಬಗ್ಗೆ ತೀರ ಕಳಕಳಿಯಿಂದ ಚಿಂತಿಸುವ, ಸಮಸ್ಯೆಯ ಆಳಕ್ಕೆ ಇಳಿದು ಶೋಧಿಸುವ ಪರಿಯನ್ನು ಬೆಳೆಸಿಕೊಳ್ಳಲು ಸಾಧ್ಯವಾಗಿದೆ.

ತೇಜಸ್ವಿಯವರ ಪ್ರಮುಖ ಕೃತಿಗಳಲ್ಲಿ ಆಡಳಿತ ವ್ಯವಸ್ಥೆಯ ಅಸಂಗತ, ಬೀಭತ್ಸ, ಭೀಕರ ಚಿತ್ರಗಳು ಕಂಡು ಬರುತ್ತದೆ. ಈ ಚಿತ್ರಗಳು ಇಡೀ ಸೃಷ್ಟಿಯ ಅಸಂಗತ, ಅಸಂಬದ್ಧ ವಿನ್ಯಾಸದ ಒಳಗೆ ಮೂಡಿಬರುವುದರಿಂದ ಅವು ಸಾಮಾನ್ಯ, ಸಾಮಾಜಿಕ, ರಾಜಕೀಯ ಟೀಕೆಗಳನ್ನು ಮೀರಿದ ಆಯಾಮವನ್ನು ಉಂಟುಮಾಡುತ್ತದೆ. ತೇಜಸ್ವಿಯು ತನ್ನ ವಿಚಾರ, ಅವಲೋಕನವನ್ನು ಏಕಕಾಲದಲ್ಲಿ ಕಾಲದೇಶಗಳ ಚೌಕಟ್ಟುಗಳಲ್ಲಿಯೂ, ಕಾಲಾತೀತ ಮತ್ತು ದೇಶಾತೀತ ಆಯಾಮವನ್ನು ಒದಗಿಸಲು ಪ್ರಯತ್ನಿಸುತ್ತಾರೆ. ಮೇಲ್ನೋಟಕ್ಕೆ ವಿಲಕ್ಷಣವೆಂದೂ, ವಿಲಕ್ಷಣರೆಂದೂ ಕಾಣಿಸುವ ಘಟನೆಗಳ ಮತ್ತು ಪಾತ್ರಗಳ ಮೂಲಕ ತೇಜಸ್ವಿ ಕಾಣಿಸುವ ಸತ್ಯಗಳು ಅದ್ಭುತವಾಗಿವೆ.

ಮಾನವನು ಇರುವ ಸ್ಥಿತಿ ಮತ್ತು ಮಾನವನ ವಿಶ್ವಾತ್ಮಕ ವ್ಯವಸ್ಥೆಯ ಒಂದು ಭಾಗವಾಗಿರುವ ವ್ಯವಸ್ಥೆಯ ಸ್ವರೂಪವನ್ನು ಕಂಡು ಕೊಳ್ಳುವುದು, ಇವರ ಬರವಣಿಗೆಯ ಪ್ರಮುಖ ನಿಲುವು ಆಗಿದೆ. ತೇಜಸ್ವಿಯು ತಮ್ಮ ತಂದೆ ಕುವೆಂಪುರವರಿಂದ ಪ್ರೇರಣೆ, ಪ್ರೋತ್ಸಾಹ ಮತ್ತು ಶಿಕ್ಷಣವನ್ನು ಪಡೆದು ಜೀವ ಜಗತ್ತಿನ ವಿಸ್ಮಯ ಲೋಕಕ್ಕೆ ಪ್ರವೇಶಿಸುತ್ತಾರೆ. ತಮ್ಮ ಬರಹಗಳಲ್ಲಿ ಗ್ರಹಿಕೆಯ ಮಾರ್ಗವನ್ನು ಹೊಸದಾಗಿ ಶೋಧಿಸಿಕೊಳ್ಳುವ, ಗ್ರಹಿಕೆಯನ್ನು ವಿಸ್ತರಿಸಿಕೊಳ್ಳುವ ಮತ್ತು ಅನುಭವಗಳನ್ನು ಶ್ರೀಮಂತಗೊಳಿಸುವ ಸಾಧ್ಯತೆಯನ್ನು ವ್ಯಕ್ತ ಪಡಿಸಿದ್ದಾರೆ.

ತೇಜಸ್ವಿ ಜೀವನ ದರ್ಶನದಲ್ಲಿ ಕ್ರಿಯಾ ಹೀನತೆಗೂ ಅವಕಾಶವಿಲ್ಲ, ಹುಂಬ ಆಶಾವಾದಕ್ಕೂ ಅವಕಾಶವಿಲ್ಲ. ಈ ಅಂಶವು ' ಜುಗಾರಿಕ್ರಾಸ್' ಕಾದಂಬರಿಯಲ್ಲಿ ಸ್ಪಷ್ಟವಾಗಿ ಮೂಡಿಬಂದಿವೆ. ' ಚಿದಂಬರ ರಹಸ್ಯ' ದಲ್ಲಿ ಕೆಸರೂರಿನ ವಿದ್ಯಮಾನಗಳಿಗೂ ಜಾಗತಿಕ ನೆಲೆಯಲ್ಲಿ ಏಲಕ್ಕಿ ವಹಿವಾಟುಗಳಿಗೂ ಇರುವ ಸಂಕೀರ್ಣ ಸಂಬಂಧದ ಸೂಚನೆ ಇದೆ. ಆದರೆ ' ಜುಗಾರಿಕ್ರಾಸ್' ಕಾದಂಬರಿಯ ಲೋಕ ಇನ್ನಷ್ಟು ವಿಸ್ಮಯಕಾರಿಯಾಗಿದೆ.
ಈ ಜಗತ್ತನ್ನು ಬದಲಾಯಿಸಲು ನಮಗೆ ಸಾಧ್ಯವಿಲ್ಲದೆ ಇರಬಹುದು. ಆದರೆ ಅದನ್ನು ಅರಿಯುವುದು ಮನುಷ್ಯನ ಎಲ್ಲಾ ಕ್ರಿಯಾಶೀಲತೆಗಳ ನಿಜವಾದ ಪ್ರಯತ್ನ ಎಂದು ತೇಜಸ್ವಿ ತಿಳಿಯಪಡಿಸುತ್ತಾರೆ.

ತೇಜಸ್ವಿ ವಿಜ್ಞಾನಿಗಳನ್ನು ತುಂಬು ಗೌರವದಿಂದ ಕಂಡರೂ ವಿಜ್ಞಾನವೇ ಒಂದು ಸಾಂಸ್ಥಿಕ ರೂಪ ಪಡೆದಾಗ ಅದರಿಂದ ಉದ್ಭವಿಸುವ ಹಿಂಸೆ, ಅಧಿಕಾರ ಲಾಲಸೆ ಮತ್ತು ಜಡತ್ವಗಳನ್ನು ಖಂಡಿಸುತ್ತಾರೆ. ಕಾದಂಬರಿಗಳಲ್ಲಿ ಸಂಶೋಧನಾ ಕೇಂದ್ರಗಳ ವಿಜ್ಞಾನಿಗಳನ್ನು ಲೇಖಕರು ಟೀಕಿಸಲು ಮತ್ತು ಲೇವಡಿ ಮಾಡಲು ಇದೇ ಕಾರಣವಾಗಿದೆ. ವಿಜ್ಞಾನದ ವಿವರವಾದ ಮಾಹಿತಿ, ತಾರ್ಕಿಕತೆಯಿಂದಾಗಿ ಪ್ರಕೃತಿಯಲ್ಲಿ, ಪರಿಸರದಲ್ಲಿ ತೇಜಸ್ವಿಯವರು ಒಂದು ಸ್ವಯಂ ಭೂವ್ಯವಸ್ಥೆಯ ನಂಬಿಕೆಯನ್ನು ಹೊಂದುತ್ತಾರೆ. ಮನುಷ್ಯ ನಿರ್ಮಿತ ಸಮಾಜದಲ್ಲಿ ಅವರಿಗೆ ಅಂತಹ ವಿಶ್ವಾಸವೂ ಇಲ್ಲ. ನಂಬಿಕೆಗಳ ಬಗ್ಗೆ ಖಚಿತತೆಯೂ ಇಲ್ಲ. ವಿಜ್ಞಾನ ಮೂಲದಿಂದ ಪಡೆದ ತಿಳುವಳಿಕೆ ಹಾಗೂ ಮಾಹಿತಿ, ಸಮಾಜ ಮೂಲದ ನಿಲುವುಗಳು ಇವುಗಳ ಸಂಶ್ಲೇಷಣೆಯಿಂದ ತಮ್ಮ ದರ್ಶನವನ್ನು ಕಾಣಿಸಲು ಪ್ರಯತ್ನಿಸುತ್ತಾರೆ.

## ಅಡಿಟಿಪ್ಪಣಿಗಳು


೧) ಅಶೋಕ. ಟಿ.ಪಿ. 'ತೇಜಸ್ವಿ ಕಥನ', ಅಕ್ಷರ ಪ್ರಕಾಶನ
ಹೆಗ್ಗೋಡು ಸಾಗರ ಕರ್ನಾಟಕ ೨೦೦೪ ಪು.ಸಂಸ.೮೬

೨) ರಮೇಶ್.ಬೆ.ಗೋ. 'ಪೂರ್ಣಚಂದ್ರತೇಜಸ್ವಿ' ದಿವ್ಯಚಂದ್ರ ಪ್ರಕಾಶನ
ಬೆಂಗಳೂರು ೨೦೦೭ ಪು.ಸಂ ೫೫

೩) ಪೂರ್ಣಚಂದ್ರ ತೇಜಸ್ವಿ ಕೆ.ಪಿ. 'ಚಿದಂಬರ ರಹಸ್ಯ' ಪುಸ್ತಕ ಪ್ರಕಾಶನ
೯೧, ೯ನೇ ಮೇನ್ ಸರಸ್ವತಿಪುರಂ ಮೈಸೂರು ೨೦೦೨ ಪು.ಸಂ ೨೧೭

೪) ರಮೇಶ್ ಬೆ.ಗೋ. 'ಪೂರ್ಣಚಂದ್ರ ತೇಜಸ್ವಿ' ದಿವ್ಯಚಂದ್ರ ಪ್ರಕಾಶನ
ಬೆಂಗಳೂರು ೨೦೦೭ ಪು.ಸಂ. ೫೬

೫) ಪೂರ್ಣಚಂದ್ರ ತೇಜಸ್ವಿ ಕೆ.ಪಿ. 'ಚಿದಂಬರ ರಹಸ್ಯ' ಪುಸ್ತಕ ಪ್ರಕಾಶನ
೯೧, ೯ನೇ ಮೇನ್ ಸರಸ್ವತಿಪುರಂ ಮೈಸೂರು ೨೦೦೭ ಪು.ಸಂ ೫೩

೬) ರಮೇಶ್ ಬೆ.ಗೋ. 'ಪೂರ್ಣಚಂದ್ರ ತೇಜಸ್ವಿ' ದಿವ್ಯಚಂದ್ರ ಪ್ರಕಾಶನ
ಬೆಂಗಳೂರು ೨೦೦೭ ಪು.ಸಂ ೫೭

೭) ಅಶೋಕ ಟಿ.ಪಿ. 'ತೇಜಸ್ವಿ ಕಥನ' ಅಕ್ಷರ ಪ್ರಕಾಶನ ಹೆಗ್ಗೋಡು
ಸಾಗರ ಕರ್ನಾಟಕ ೨೦೦೪ ಪು.ಸಂ ೯೫

೮) ಪ್ರಹ್ಲಾದ್ ಡಿ.ವಿ( ಸಂ) 'ತೇಜಸ್ವಿ ಲೋಕ' ಸಂಚಯ ಪ್ರಕಾಶನ
ಬೆಂಗಳೂರು ೨೦೦೭ ಪು.ಸಂ ೨೦

೯) ಪ್ರಹ್ಲಾದ್ ಡಿ.ವಿ( ಸಂ) 'ತೇಜಸ್ವಿ ಲೋಕ' ಸಂಚಯ ಪ್ರಕಾಶನ
ಬೆಂಗಳೂರು ೨೦೦೭ ಪು.ಸಂ ೬೬


********************

# ಅಧ್ಯಾಯ-೫

# ಅಧ್ಯಯನದ ಫಲಶ್ರುತಿ ಹಾಗೂ ಸಮಾರೋಪ

# ಅಧ್ಯಾಯ-೫
# ಅಧ್ಯಯನದ ಫಲಶ್ರುತಿ ಹಾಗೂ ಸಮಾರೋಪ

ತೇಜಸ್ವಿ ಕಾದಂಬರಿಗಳಲ್ಲಿ ಸಾಮಾಜಿಕ ಪ್ರಜ್ಞೆ ಎಂದ ಕೂಡಲೇ ಅವರ ಬರಹವನ್ನು ಓದುವಾಗ ಸಮಾಜದ ವಿಶ್ವರೂಪವನ್ನು ನೋಡುವ ಅನುಭವವಾಗುವುದು. ನಮ್ಮ ದೇಶದ ಜೀವಂತ ಚಿತ್ರಣ ನಮ್ಮ ಕಣ್ಣ ಮುಂದೆ ಚಿತ್ರಿತಗೊಂಡಂತೆ ಅವರ ಬರಹವು ನಮ್ಮನ್ನು ಓದಿಸುತ್ತಾ ಹೋಗುತ್ತದೆ. ಅಂದರೆ ಸಮಾಜದಲ್ಲಿ ಮಾನವನ ಚಟುವಟಿಕೆಗಳು ಸಾಮಾಜಿಕ ಚೌಕಟ್ಟಿನಲ್ಲಿ ಹೇಗೆ ಕಾರ್ಯಗತವಾಗುತ್ತದೆ ಎಂಬುವುದನ್ನು ಬಹು ಮಾರ್ಮಿಕವಾಗಿ ಬರೆಯುತ್ತಾರೆ.

ತೇಜಸ್ವಿಯವರು ತಮ್ಮ ಬರಹಗಳಲ್ಲಿ ಮೊದಲಾಗಿ ಸಾಮಾಜಿಕ ಸಂಬದ್ಧತೆಯ ಬಗ್ಗೆ ತಮ್ಮ ಮೊದಲ ಕಥೆಗಳಲ್ಲಿ ಸೂಚ್ಯವಾಗಿ ಚಿತ್ರಿಸಿರುವುದನ್ನು ಕಾಣಬಹುದು. ಅವರಿಗೆ ಸಮಾಜದ ಹಲವು ಮುಖಗಳ ಬಗೆಗಿನ ಕುತೂಹಲ, ಕುರುಡು ನಂಬಿಕೆಯಲ್ಲಿ ಗ್ರಾಮೀಣ ಜನತೆಯ ಬದುಕು, ಆಸೆ, ಆಕಾಂಕ್ಷೆಗಳನ್ನು ಕುರಿತು ದಕ್ಷವಾಗಿ ಬಿಂಬಿಸಿದ್ದಾರೆ. ಭಾರತ ಸ್ವಾತಂತ್ರ್ಯಗೊಂಡ ನಂತರದಲ್ಲಿ ನಮ್ಮ ಸಮಾಜ ಪಡೆದ ವಿಕೃತ ತಿರುವುಗಳಿಗೆ, ಸಂಕೀರ್ಣ ಬೆಳವಣಿಗೆಗೆ ಕಾದಂಬರಿಯು ಮೂರ್ತ ರೂಪವನ್ನು ಕೊಟ್ಟಿದೆ ಎಂದು ಹೇಳಬಹುದು.

ತೇಜಸ್ವಿ ಸಾಹಿತ್ಯದಲ್ಲಿ ಪರಿಸರ ಹಾಗೂ ಸಮಾಜದ ಬಗ್ಗೆ ಅತ್ಯಂತ ಕಾಳಜಿಗಳು ಹಾಗೂ ಪ್ರಗತಿಪರ ಚಿಂತನೆಗಳು ಕಂಡುಬರುತ್ತದೆ. ಜೀವನದಲ್ಲಾದ ಅನುಭವಗಳನ್ನು ಅವರು ತಮ್ಮ ಸಾಹಿತ್ಯದ ಮೂಲಕ ನಮ್ಮೊಡನೆ ಹಂಚಿಕೊಂಡಿದ್ದಾರೆ. ಅವರ ಬರವಣಿಗೆಯಲ್ಲಿ ಒಂದು ರೀತಿಯ ಶಿಸ್ತು ಕಾರ್ಯೋನ್ಮುಖವಾಗಿರುವುದನ್ನು ನಾವು ನೋಡಬಹುದು. ಅವರ ಕೃತಿಗಳಲ್ಲಿ ನಿರೂಪಣೆಯಲ್ಲಿನ ಒಂದು ಬಗೆಯ ನಿರ್ಲಿಪ್ತತೆ ಮತ್ತು ನವಿರಾದ ಹಾಸ್ಯಪ್ರಜ್ಞೆ ಹಾಗೂ ವಿಸ್ಮಯಕಾರಿ ಪತ್ತೇದಾರಿಕೆಯು ಕಂಡು ಬರುತ್ತದೆ. ತಂದೆ ಕುವೆಂಪುರವರಂತೆ ತೇಜಸ್ವಿ ಪ್ರಕೃತಿಯ ಮುಗ್ಧತೆ ಮತ್ತು ನಿಗೂಢತೆಗೆ ಪರವಶರಾಗಲಿಲ್ಲ. ಪರಿಸರದ ವಿಷಯದಲ್ಲಿದ್ದ ಅವರ ಜಿಜ್ಞಾಸೆ ಒಬ್ಬ ವಿಜ್ಞಾನಿಯಲ್ಲಿ ಮಾತ್ರ ಇರಬಹುದಾದ ಮಾದರಿ ಎಂದು ಹೇಳಬಹುದು. ತೇಜಸ್ವಿ ಮೂಲತಃ ಸಾಹಿತಿಯಾದ್ದರಿಂದ ಆರ್ಥಿಕ ಮತ್ತು ಸಾಮಾಜಿಕ ಆಯಾಮಗಳ ನೆಲೆಯಿಂದ ಗ್ರಾಮೀಣ ಜೀವನವನ್ನು ನಿರಾಕರಿಸುವುದಾಗಲೀ, ಪರಿವರ್ತಿಸುವುದಾಗಲೀ ಮಾಡಲಿಲ್ಲ. ಬದಲಾಗಿ ಗ್ರಾಮೀಣ ಪರಿಸರದ ಸೂಕ್ಷ್ಮಧ್ವನಿಯನ್ನು ಆಲಿಸುತ್ತಾರೆ.

ತೇಜಸ್ವಿಯವರ ಸಾಮಾಜಿಕ ಪ್ರಜ್ಞೆಯ ಕುರಿತು ಮಾತನಾಡುವಾಗ ಅಥವಾ ಅವರ ಕುಟುಂಬದ ಕುರಿತು ಮಾತನಾಡುವಾಗ ಅವರ ಸಾಕುನಾಯಿ ' ಕಿವಿ' ಮತ್ತು ಅದರ ಮರಿಯು ಅವರ ಕಾದಂಬರಿಗಳಲ್ಲಿ ಪಾತ್ರವಾಗಿ ಕಾಣುವುದನ್ನು ನಾವು ನೋಡಬಹುದು.

ತೇಜಸ್ವಿಯವರ ಸಾಹಿತ್ಯ ಮತ್ತು ವ್ಯಕ್ತಿತ್ವವನ್ನು ಸರಿಯಾಗಿ ಅರ್ಥ ಮಾಡಿಕೊಂಡಾಗ ಮಾತ್ರ ಅವರ ಸೃಷ್ಟಿಶೀಲ ಸಾಹಿತ್ಯ ಮತ್ತು ಸಾಹಿತ್ಯೇತರ ಬರವಣಿಗೆಯಲ್ಲಿ ಒಂದೇ ಆಶಯವಿದೆ ಅಥವಾ ಒಂದೇ ಉದ್ದೇಶವನ್ನು ಇಟ್ಟುಕೊಂಡು ಬರೆದಂಥವುಗಳು ಎಂಬ ಸತ್ಯ ಸಂಗತಿಯು ತಿಳಿಯುತ್ತದೆ. ಅವರ ಸೃಜನಶೀಲ ಸಾಹಿತ್ಯ ಮತ್ತು ಸಾಹಿತ್ಯೇತರ ಕೃತಿ ಎರಡರಲ್ಲೂ ಸಾಮಾಜಿಕ ಕಾಳಜಿ, ವೈಚಾರಿಕ ಪ್ರಜ್ಞೆ ಹಾಗೂ ವೈಜ್ಞಾನಿಕ ಮನೋಧರ್ಮಗಳು ಸಮಾನಾಗಿ ಮಿಳಿತಗೊಂಡಿರುವುದನ್ನು ಕಾಣುತ್ತೇವೆ. ಸಾಮಾಜಿಕವಾಗಿ ಬದುಕಿನ ಬಗೆಗೆ ತೇಜಸ್ವಿಯವರಿಗಿದ್ದ ಬೆರಗು ಮತ್ತು ವಿಸ್ಮಯಗಳು ಅವರನ್ನು ಕರ್ನಾಟಕದ ಪ್ರಮುಖ ಪರಿಸರ ವಿಜ್ಞಾನಿಯನ್ನಾಗಿ ರೂಪಿಸಿವೆ.

ತೇಜಸ್ವಿ ಸಸ್ಯ ಸಂಕುಲ, ಪ್ರಾಣಿ ಸಂಕುಲ ಅಥವಾ ಪರಿಸರ ಶಾಸ್ತ್ರಗಳಿಗೆ ಸಂಬಂಧಿಸಿದಂತೆ ಪುಸ್ತಕಗಳನ್ನು ಓದಿ ಪ್ರಭಾವಿತರಾಗುವುದಿಲ್ಲ. ಬದಲಾಗಿ ಬದುಕನ್ನು ನೋಡಿ ಅರಿತವರು. ಈ ಭೂಮಿಯ ಮೇಲಿನ ಪ್ರತಿಯೊಂದು ಜೀವಿಗೂ ಬದುಕುವ ಹಕ್ಕಿದೆ. ಮತ್ತು ಒಂದರ ಜೀವನವು ಮತ್ತೊಂದು ಜೀವನದೊಂದಿಗೆ ಬೆಸೆದುಕೊಂಡಿದೆ. ಒಂದರ ಅಳಿವು ಮತ್ತೊಂದರ ಅಳಿವಿಗೆ ನಾಂದಿಯಾಗುತ್ತದೆ ಎಂಬ ನಿತ್ಯ ನೂತನ ಸತ್ಯಗಳನ್ನು ಬೆರಗಿನಿಂದ, ಅನುಭವದಿಂದ ಕಂಡುಕೊಂಡವರು ತೇಜಸ್ವಿಯವರು.

ಸೃಜನಶೀಲ ವ್ಯಕ್ತಿತ್ವದಿಂದ ಕೂಡಿದ ತೇಜಸ್ವಿಯವರು ಅಭಿವ್ಯಕ್ತಿಯ ವಿಸ್ತರಣೆಗಾಗಿ ಕಾದಂಬರಿ ಕ್ಷೇತ್ರವನ್ನು ಆಯ್ಕೆ ಮಾಡಿದ್ದಾರೆ ಎಂದರೆ ತಪ್ಪಲ್ಲ. ಏಕೆಂದರೆ ಅವರ ಕಾದಂಬರಿಗಳಲ್ಲಿ ಸೃಜನಶೀಲತೆ ಮತ್ತು ನವ್ಯ ಮನೋಧರ್ಮದ ವಿಚಾರಗಳು ಎದ್ದು ಕಾಣುತ್ತದೆ. ಸಹೃದಯ ಮನಸ್ಸು ಸಮಾಜದ ಬಗ್ಗೆ ತೋರಿಸುವ ಕಳಕಳಿ, ಸಮಸ್ಯೆಯ ಆಳಕ್ಕೆ ಇಳಿದು ಸಂಶೋಧನೆ ಮಾಡುವ ರೀತಿ ಅವರ ಬರಹಗಳಲ್ಲಿ ಸ್ಪಷ್ಟವಾಗಿ ಗೋಚರಿಸುತ್ತದೆ.

ದೇಶದ ರಾಜಕೀಯ ಅಧಿಕಾರಲಾಲಸೆಯ ಹುನ್ನಾರಗಳಿಂದ ಎದುರಾಗಿರುವ ಅನೇಕ ಸಮಸ್ಯೆಗಳ ಬಗೆಗೆ ತೀವ್ರ ಆಕ್ರೋಶವಿದ್ದು, ಪರಿಸರ, ಶಿಕ್ಷಣ ಮತ್ತು ಮಾನವನ ಇಡೀ ಬದುಕು ಅವಸಾನದ ಕಡೆಗೆ ಹೊರಟಿರುವ ದುರಂತಗಳನ್ನು ಕುರಿತ ಮಾನವೀಯ ಚಿಂತನೆಯು ಇವರ ಬರಹಗಳಲ್ಲಿ ವ್ಯಕ್ತವಾಗಿದೆ. ಈ ವೈಚಾರಿಕ ಬರಹಗಳಲ್ಲಿನ ಅನೇಕ ಪ್ರಶ್ನೆಗಳು ಬದುಕಿನಲ್ಲಿ ಅಂತರ್ಗತವಾಗಿ ದಿಕ್ಕು ಕಾಣದ ಸಮಾಜ ವ್ಯವಸ್ಥೆಯ ನಿರ್ಮಾಣಕ್ಕೆ ಹೇಗೆ ಕಾರಣವಾಗಿದೆ ಎಂಬುವುದನ್ನು ' ಚಿದಂಬರ ರಹಸ್ಯ' ಮತ್ತು ' ಜುಗಾರಿಕ್ರಾಸ್' ಕಾದಂಬರಿಗಳಲ್ಲಿ ಶೋಧನೆಗೆ ಒಳಪಡಿಸಲಾಗಿದೆ. ಸುಮಾರು ಐದು ದಶಕಗಳ ಕಾಲಮಾನದ ಸಾಮಾಜಿಕ ಸಮಸ್ಯೆಗಳಿಗೆ ತೇಜಸ್ವಿಯವರ ಸಂವೇದನೆ ನಿರಂತರವಾಗಿ ನಿಷ್ಠುರವಾಗಿ ಪ್ರತಿಕ್ರಿಯಿಸುತ್ತಲೇ ಬಂದಿದೆ.

# ಸಮಾರೋಪ

" ಸಾಹಿತ್ಯ ಮತ್ತು ಸಾಮಾಜಿಕ ಚಿಂತನೆಗಳು ಹದಗೊಂಡು ಒಂದಾದ ಬರವಣಿಗೆಯನ್ನು ಕನ್ನಡಕ್ಕೆ ನೀಡುವ ಮೂಲಕ ಸಾಂಸ್ಕೃತಿಕ ಚಲನಶೀಲತೆಗೆ ಕಾರಣರಾದ ಒಬ್ಬ ಮಹತ್ವದ ಲೇಖಕ ಪೂರ್ಣಚಂದ್ರ ತೇಜಸ್ವಿಯವರು." ಎಂಬುವುದಾಗಿ ಸಾಹಿತಿ ಬರಗೂರು ರಾಮಚಂದ್ರಪ್ಪನವರು ತೇಜಸ್ವಿಯವರನ್ನು ಬಣ್ಣಿಸಿದ್ದಾರೆ. ಶಿವರಾಮ ಕಾರಂತರಂತೆ ಅನೇಕ ಜ್ಞಾನ ಶಾಖೆಗಳಲ್ಲಿ ಪರಿಣತಿ ಪಡೆದು, ಗಂಭೀರವಾಗಿ ಬರೆಯುವ ಪೂರ್ಣಚಂದ್ರತೇಜಸ್ವಿ ಕನ್ನಡದ ಅತ್ಯುತ್ತಮ ಬರಹಗಾರರಲ್ಲಿ ಒಬ್ಬರಾಗಿದ್ದಾರೆ. ಅವರ ಬರವಣಿಗೆ ಕಥೆ, ಕವನ, ನಾಟಕ, ಕಾದಂಬರಿ, ವೈಜ್ಞಾನಿಕ ಕೃತಿಗಳು, ಪ್ರವಾಸಕಥನ, ಆತ್ಮಕಥೆ- ಹೀಗೆ ಹಲವು ಪ್ರಕಾರಗಳಲ್ಲಿ ವ್ಯಕ್ತಗೊಂಡಿದ್ದು, ಅವುಗಳಲ್ಲಿ ಸಾಮಾಜಿಕ, ರಾಜಕೀಯ, ಪರಿಸರ, ಧಾರ್ಮಿಕ, ಶಿಕ್ಷಣ, ವಿಜ್ಞಾನ, ಅಭಿವೃದ್ಧಿಗಳ ಬಗ್ಗೆ ವೈಚಾರಿಕ ನಿಲುವುಗಳನ್ನು ಪ್ರಕಟಿಸಿ ಕನ್ನಡ ಸಾಹಿತ್ಯದಲ್ಲಿ ಚಿರಂಜೀವಿಯಾಗಿದ್ದಾರೆ.

ಇಪ್ಪತ್ತೊಂದನೆ ಶತಮಾನದ ಶ್ರೇಷ್ಠ ಬರಹಗಾರರಾದ ಇವರು ಓರ್ವ ಚಿಂತಕ ಹಾಗೂ ಪರಿಸರ ವಿಜ್ಞಾನಿ ಕೂಡ. ಕನ್ನಡ ಸಾಹಿತ್ಯ ಲೋಕಕ್ಕೆ ಪೂರ್ಣಚಂದ್ರ ತೇಜಸ್ವಿಯವರ ಕೊಡುಗೆ ಅಪೂರ್ವವಾದುದು. ಅಲ್ಲದೆ ಸಾಹಿತ್ಯೇತರ ಕ್ಷೇತ್ರಗಳಲ್ಲಿಯೂ ತಮ್ಮತನವನ್ನು ಮೆರೆದಿರುವ ವಿಶಿಷ್ಟ ಲೇಖಕರಾಗಿದ್ದಾರೆ. ನವೋದಯ, ನವ್ಯ-ನವ್ಯೋತ್ತರ ಕಾಲಘಟ್ಟಗಳ ನಡುವೆ ತಮ್ಮದೇ ಆದ ವಿಶಿಷ್ಟ ಅಭಿವ್ಯಕ್ತಿ ಕ್ರಮವನ್ನು ರೂಢಿಸಿಕೊಂಡು ಬರೆಯುತ್ತಿರುವ ತೇಜಸ್ವಿ ನವೋದಯದ ಸರಳ ಕಥಾನಕ ಶೈಲಿ, ನವ್ಯದ ಮನೋವಿಶ್ಲೇಷಣಾತ್ಮಕತೆ ಹಾಗೂ ದಲಿತ ಬಂಡಾಯದ ಸಾಮಾಜಿಕ ಕಳಕಳಿಯನ್ನು ರೂಢಿಸಿಕೊಂಡಿದ್ದಾರೆ.

ತೇಜಸ್ವಿ ಸಾಹಿತ್ಯದ ಪ್ರತಿಯೊಂದು ಅಂಶವು ಸಮಗ್ರವೂ, ಸಮರ್ಥವೂ ಆಗಿದ್ದು, ಅವರ ವಿದ್ವತ್ತು ಮತ್ತು ವಿಶ್ಲೇಷಣಾ ಸಾಮರ್ಥ್ಯಕ್ಕೆ ಪ್ರತೀಕವಾಗಿದೆ. ನಿಸರ್ಗದೊಡನೆ ಮನುಷ್ಯನ ಸಂಬಂಧವನ್ನು ವಿವರಿಸುವಾಗಲೆಲ್ಲ ಹಾಸ್ಯ ಪ್ರಜ್ಞೆಯನ್ನು ತರುವ ತೇಜಸ್ವಿಯವರು, ಬಹಳ ಎಚ್ಚರಿಕೆಯಿಂದ ಮನುಷ್ಯನ ಅಸ್ತಿತ್ವದ ಹಾಗೂ ಪ್ರಕೃತಿಯ ಅವಸಾನದ ಪ್ರಶ್ನೆಯನ್ನು ನಮ್ಮ ಮುಂದೆ ತೆರೆದಿಡುತ್ತಾರೆ. ಹಾಗೆಯೇ ವ್ಯಕ್ತಿ ಹಾಗೂ ಸಮಾಜದ ಸಂಬಂಧಗಳು ಕೂಡ ಇವರ ಬರಹಗಳಲ್ಲಿ ಅನಾವರಣಗೊಳ್ಳುತ್ತದೆ. ನಮ್ಮ ಬದುಕಿನ ಸಂಕೀರ್ಣತೆಯನ್ನು ಅನೇಕ ಮುಖಗಳಿಂದ ಅನಾವರಣಗೊಳಿಸಿರುವ ತೇಜಸ್ವಿ ಕಾವ್ಯಮಯವಾಗಿ ಗದ್ಯವನ್ನು ಬಳಸುತ್ತಾ ಹೋಗುತ್ತಾರೆ.

ಪ್ರಕೃತಿಯ ಭವ್ಯ ದೃಶ್ಯ ಸೌಂದರ್ಯಗಳ ಮುಂದೆ ಮಗು ಸಹಜ ಕುತೂಹಲ, ಅಪ್ಪಟ ಮುಗ್ಧತೆಗಳು, ಸರಳವಾದ ವಿಚಾರ, ನೇರವಾಗಿ ನೋಡುವ ದೃಷ್ಟಿಕೋನ ಇವೆಲ್ಲವು ಒಂದು ಸಮಾಜದ ಬಗ್ಗೆ ಚಿಂತನೆಯನ್ನು, ಜಾಗೃತಿಯನ್ನು ಮೂಡಿಸುವಲ್ಲಿ ಪ್ರಮುಖ ಪಾತ್ರ ವಹಿಸುತ್ತದೆ.

ಹೀಗೆ ಕನ್ನಡ ಸಾಹಿತ್ಯ ಲೋಕದಲ್ಲಿ ತೇಜಸ್ವಿಯ ಪ್ರತಿಯೊಂದು ವಿಚಾರವೂ ಓದುಗರನ್ನು ಆಳವಾದ ಚಿಂತನೆಗೆ ಈಡು ಮಾಡುತ್ತದೆ. ವ್ಯಕ್ತಿಯ ವ್ಯಕ್ತಿತ್ವ ವಿಕಾಸಕ್ಕೆ ದಾರಿಯಾಗಿ, ಸಾಮಾಜಿಕ ಚಿಂತನೆಯ ಬಗ್ಗೆ ಗಮನ ಸೆಳೆಯುವಂತೆ ಮಾಡುವ ಬರವಣಿಗೆಯು ವೈಶಿಷ್ಟ್ಯಪೂರ್ಣವಾದುದಾಗಿದೆ.

## ಅನುಬಂಧ ೧
## ಪರಾಮರ್ಶನ ಗ್ರಂಥಗಳು

೧. ಬಿ.ಚಂದ್ರೇಗೌಡ, ಬಿ.ಎಲ್.ರಾಜು (ಸಂ), " ತೇಜಸ್ವಿನೆನಪು," ಸಂಗ್ರಹ ಲೇಖನಗಳು, ಪ್ರಕಾಶನ ರಂಗಭಾರತಿ (ರಿ) ಹೂವಿನಹಡಗಲಿ, ಬಳ್ಳಾರಿ. ೨೦೦೭

೨. ಜಿ.ಎಸ್. ಭಟ್ಟ (ಸಂ), ಆರ್.ಡಿ ಹೆಗಡೆ ಆಲ್ಮನೆ, ಚೇತನ ಸಾಹಿತ್ಯಮಾಲೆ: ಆಧುನಿಕಬರಹಗಾರರು, " ಕೆ.ಪಿ.ಪೂರ್ಣಚಂದ್ರ ತೇಜಸ್ವಿ," ಚೇತನ ಪ್ರಿಂಟರ್ಸ್ ಅಂಡ್‌ಪಬ್ಲಿಷರ್ಸ್, ಕೆ.ಆರ್ ಮೊಹಲ್ಲಾ, ಮೈಸೂರು. ೨೦೦೭

೩. ಬೆ.ಗೋ.ರಮೇಶ್, ಸಾಹಿತ್ಯಲೋಕದ ಪ್ರಾತಃಸ್ಮರಣೀಯರು, " ಪೂರ್ಣಚಂದ್ರ ತೇಜಸ್ವಿ", ದಿವ್ಯಚಂದ್ರ ಪ್ರಕಾಶನ, ಬಸವೇಶ್ವರ ನಗರ, ಬೆಂಗಳೂರು೨೦೦೭

೪. ಟಿ.ಪಿ ಅಶೋಕ, " ತೇಜಸ್ವಿ ಕಥನ," ಅಕ್ಷರ ಪ್ರಕಾಶನ ಹೆಗ್ಗೋಡು ಸಾಗರ ಕರ್ನಾಟಕ. ೨೦೦೪

೫. ಡಾ। ಪ್ರಧಾನ್ ಗುರುದತ್ತ (ಸಂ), ಡಾ। ಎಚ್.ಎಂ ಮಹೇಶ್ವರಯ್ಯ, ನವಕರ್ನಾಟಕ ಸಾಹಿತ್ಯ ಸಂಪದ, " ಪೂರ್ಣಚಂದ್ರ ತೇಜಸ್ವಿ", ನವಕರ್ನಾಟಕ ಪ್ರಕಾಶನ. ೨೦೦೨

೬. ಡಿ.ವಿ.ಪ್ರಹ್ಲಾದ್ (ಸಂ), " ತೇಜಸ್ವಿಲೋಕ" ಪೂರ್ಣಚಂದ್ರ ತೇಜಸ್ವಿ ಅವರ ಸಾಹಿತ್ಯ ಕುರಿತ ಬರಹಗಳು, ಸಂಚಯ ಬೆಂಗಳೂರು. ೨೦೦೭

೭. ಕೆ.ಪಿ ಪೂರ್ಣಚಂದ್ರ ತೇಜಸ್ವಿ, " ಚಿದಂಬರ ರಹಸ್ಯ" ಪುಸ್ತಕ ಪ್ರಕಾಶನ, ಸರಸ್ವತಿಪುರಂ ಮೈಸೂರು. ೨೦೦೭

೮. ಕೆ.ಪಿ ಪೂರ್ಣಚಂದ್ರ ತೇಜಸ್ವಿ, " ಜುಗಾರಿಕ್ರಾಸ್", ಪುಸ್ತಕ ಪ್ರಕಾಶನ ಸರಸ್ವತಿಪುರಂ ಮೈಸೂರು. ೨೦೦೬.

*****************

